## "ಸಿದ್ಧಗಂಗಾ ಮಾಸ ಪತ್ರಿಕೆಗೆ" ಪ್ರೋತ್ಸಾಹ ನೀಡಿರುವ ಆಜೀವ ಸದಸ್ಯರುಗಳು

1166 ಶ್ರೀ ಎಸ್. ರುದ್ರಯ್ಯ, ಜೂ. ಇಂಜಿನಿಯರ್ S/o ಶ್ರೀ ಸುಬ್ಬಯ್ಯ ಪಾಂಬಹಳ್ಳಿ ಮತ್ತು ಅಂಚೆ, ಯಳಂದೂರು ತಾ|| ಮೈಸೂರು ಜಿಲ್ಲೆ.

1167 ಶ್ರೀ ಶಿವಮಾದಯ್ಯ, ನಂ 745, 7ನೇ ಕ್ರಾಸ್, ರಾಮಾನುಜ ರಸ್ತೆ ಮೈಸೂರು – 570004.

1168 ಶ್ರೀ ಎಂ. ಎಂ. ಕೋರಿ, ಇಂಜಿನಿಯರ್, ನಂ ಸಿ–10, ಕೇಶರ್ ಭಾಗ್, ವಿಲೆ ಪಾರ್ಲೆ (ಪೂರ್ವ) ಬೊಂಬಾಯಿ –400057.

1169 ಶ್ರೀ ವಿ. ಎಲ್. ಬಸವರಾಜು, ಜೂ. ಇಂ, ಎಫ್. ಡಿ. ಸಿ. ಸಬ್ ಡಿವಿಜನ್, ನಂ.4- ಕಾಡ- ಯು ಕೆ ಪಿ, ಹುಣಸೂರು ಮತ್ತು ಅಂಚೆ –585215. ಸುರಪುರ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ.

1170 ಶ್ರೀಮತಿ ಟಿ. ಪುಷ್ಪಾ D/o ಎ. ಪಿ. ಬಸವರಾಜಪ್ಪ, I ಟೈಪ್, 97, ಬಿ. ಇ.ಎಮ್. ಎಲ್ ನಗರ, ಕೆ. ಜಿ. ಎಫ್. 563115

1171 ಶ್ರೀ ಬಿ. ರಾಜಪ್ಪ, ನಂ, 22 "ಸುಕೃತ" 4 ನೇ ಮುಖ್ಯರಸ್ತೆ, ಮಾರುತಿ ಬಡಾವಣೆ, ಬೆಂಗಳೂರು. 560021

1172 ಶ್ರೀ ಬಿ. ಎಸ್. ಚಿಕ್ಕಣ್ಣ. ಮುಖ್ಯೋಪಾಧ್ಯಾಯರು, ಎಸ್. ಟಿ. ಎಸ್. ಪ್ರೌಢಶಾಲೆ, ಕಾಗ್ಗೆರೆ ಮತ್ತು ಅಂಚೆ, 572103, ಕುಣಿಗಲ್

1173 ಶ್ರೀ ಶ್ರೀ ಶಿವಕುಮಾರ ಶಿವಾಚಾರ್ಯ ಸ್ವಾಮಿಗಳು, ಕೋಟೆ (ಹಿರೇಮಠ) ಕುಣಿಗಲ್ ಮತ್ತು ತಾಲ್ಲೂಕು.

1174 ಡಾ|| ಆರ್. ಲಕ್ಷ್ಮಣರಾವ್ ಎಂ. ಡಿ. ಫಿಜಿಷಿಯನ್, ಹೌಸಿಂಗ್ ಬೋರ್ಡ್ ಕಾಲೋನಿ, ಸರ್ಕಾರಿ ಬಾಲಕರ ಪ್ರೌಢಶಾಲೆ ಹಿಂಭಾಗ ತಿಪಟೂರು, ತುಮಕೂರು ಜಿಲ್ಲೆ.

1175 ವಿದ್ವಾನ್ ಶ್ರೀ ಹೆಚ್. ಕೆ. ಸಿದ್ಧಗಂಗಯ್ಯ, ನಂ 18/A 5ನೇ ಮುಖ್ಯರಸ್ತೆ, 8ನೇ ಕ್ರಾಸ್, ಸರಸ್ವತಿ ಪುರಂ ಮೈಸೂರು-570009

1176 ಶ್ರೀ ಹೆಚ್. ಎಸ್. ಶಿವಶಂಕರ್, S/o ಹೆಚ್. ಎಸ್. ಸೋಮಶೇಖರಯ್ಯ ಮೈಸೂರು ಬ್ಯಾಂಕ್ ರಸ್ತೆ, ಹೊಸಕೋಟೆ–562114 ಬೆಂಗಳೂರು ಜಿಲ್ಲೆ.

1177 ಶ್ರೀ ಚಂದ್ರಯ್ಯ, S/o ಅಡವಪ್ಪ, ಕಟ್ಟಿಗೇನಹಳ್ಳಿ, ಕೋರ ಅಂಚೆ ತುಮಕೂರು ತಾಲ್ಲೂಕು.

# ಧರ್ಮ ಮತ್ತು ಮಠಾಧಿಪತಿಗಳು

ಜೀವನದ ಪರಿಪೂರ್ಣತೆಗೆ ಧರ್ಮ ಅನಿವಾರ್ಯ. ಧರ್ಮ ರಹಿತವಾದ ಮಾನವ ಸಮಾಜವನ್ನು ಬಹುಶಃ ಇತಿಹಾಸ ಕಾಣಲಾರದು. ಬಿದ್ದವನನ್ನು, ಬೀಳುತ್ತಿರುವವನನ್ನು, ಬೀಳಲಿರುವವನನ್ನು ಎತ್ತಿ ಹಿಡಿಯುವುದೇ ಧರ್ಮ. "ಪತಿತಂ ಪತಂತಂ ಪತಿಷ್ಯಂತಂ ವಾ ಉದ್ಧೃತ್ಯ ಧರತೀತಿ ಧರ್ಮಃ" ಎಂಬ ಉಪನಿಷತ್ ವಾಣಿ ಮೊಳಗುತ್ತದೆ. ವ್ಯಕ್ತಿ ನೈತಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ಧಾರ್ಮಿಕವಾಗಿ, ಚಾರಿತ್ರ್ಯ ಶುದ್ಧಿಯಲ್ಲಿ ಉದ್ಧಾರವಾಗುವಂತೆ ಎತ್ತಿ ಹಿಡಿಯುವುದೇ ಧರ್ಮ. "ಧ್ರಿಯತೇ ಅನೇನ ಇತಿ ಧರ್ಮಃ"; "ಧಾರಣಾದ್ಧರ್ಮಮಿತ್ಯಾಹುಃ" ಮೊದಲಾದ ಮಾತುಗಳೂ ಇದನ್ನೇ ಸೂಚಿಸುತ್ತವೆ. ಧರಿಸುವುದರಿಂದ ಧರ್ಮ. ಧರ್ಮವು ಪ್ರಜೆಗಳನ್ನು ಧರಿಸುತ್ತದೆ. ಯಾವುದರಲ್ಲಿ ಧಾರಣೆಯುಂಟೋ ಅದು ಧರ್ಮವೆಂದು ನಿಶ್ಚಯ. ಧರ್ಮಕ್ಕೆ ಮನುಸ್ಮೃತಿ ಹೀಗೆ ಲಕ್ಷಣಗಳನ್ನು ನಿರೂಪಿಸುತ್ತದೆ" ಧೃತಿಃ ಕ್ಷಮಾ ದಮೋಽಸ್ತೇಯಂ ಶೌಚಮಿಂದ್ರಿಯ ನಿಗ್ರಹಃ | ಧೀರ್ವಿದ್ಯಾ ಸತ್ಯಮಕ್ರೋಧೋ ದಶಕಂ ಧರ್ಮ ಲಕ್ಷಣಂ |" ತೃಪ್ತಿ, ತಾಳ್ಮೆ, ಮನಸ್ಸನ್ನು ನಿಗ್ರಹಿಸುವುದು, ಶುಚಿಜೀವನ, ಇಂದ್ರಿಯಗಳನ್ನು ವಶದಲ್ಲಿಟ್ಟುಕೊಂಡಿರುವುದು, ಶಾಸ್ತ್ರ ಪಾಂಡಿತ್ಯ, ಆತ್ಮಜ್ಞಾನ, ಸತ್ಯ, ಶಾಂತಿ ಇವು ಧರ್ಮದ ಲಕ್ಷಣಗಳು. ಅಂದರೆ ಉದ್ಧರಿಸುವಂತಹುದು ಎಂಬ ಅರ್ಥವನ್ನು ಒಟ್ಟಾರೆ ಒಪ್ಪುತ್ತದೆ ಧರ್ಮ. ವ್ಯಕ್ತಿಯನ್ನು, ಸಮಾಜವನ್ನು ಸುಸ್ಥಿತಿಯಲ್ಲಿ, ಸುವ್ಯವಸ್ಥೆಯಲ್ಲಿ ಎತ್ತಿ ಹಿಡಿಯುವ ಶಕ್ತಿ ಧರ್ಮವೆನ್ನಬಹುದು. ವ್ಯಕ್ತಿಯಲ್ಲಿರುವ ಮಾನವತೆಯನ್ನು ಕ್ರಮವಾಗಿ ಅಭಿವೃದ್ಧಿಗೊಳಿಸಿ ಮೋಕ್ಷಕ್ಕೆ ಸಾಧಕವಾದದ್ದು ಧರ್ಮ.

ಧರ್ಮ ಎಂಬ ಮಾತು ಕಾಲಕಾಲಕ್ಕೆ ಅರ್ಥ ವಿಸ್ತಾರವನ್ನು ಪಡೆಯುತ್ತಾ ಹೋಗುವುದು ಕಾಣಬಂದಿದೆ. "ಆಚಾರಃ ಪರಮೋಧರ್ಮಃ", "ಸ್ವಧರ್ಮೇ ನಿಧನಂ ಶ್ರೇಯಃ" ಎಂಬಂಥ ಮಾತುಗಳು ಸೀಮಿತಾರ್ಥವನ್ನು ಒಳಗೊಂಡಿರುವಂತೆ ಕಾಣಬಂದರೂ ವ್ಯಾಪಕವಾದ ಅರ್ಥವಲಯವನ್ನು ಪಡೆದಿರುವುದು ಹೊಳೆಯುತ್ತದೆ. ಮತ್ತು "ಯತೋಽಭ್ಯುದಯ ನಿಶ್ರೇಯಸಃ ಸಿದ್ಧಿಸ್ಸಧರ್ಮಃ" ಎಂಬ ಮಾತಿನಲ್ಲಿ ಇಹಪರಗಳಲ್ಲಿ ಅಭ್ಯುದಯ ಮತ್ತು ನಿಶ್ರೇಯಗಳನ್ನು ಉಂಟು ಮಾಡುವುದು ಧರ್ಮವೆನ್ನುತ್ತದೆ. ಹೀಗಾಗಿ ಧರ್ಮದ ವ್ಯಾಖ್ಯೆವ್ಯಾಪ್ತಿಗಳು "ಜಗದಗಲ ಮುಗಿಲಗಲ ಮಿಗೆಯಗಲ". ಮತ್ತು "ಸಕಲ ಜೀವರಿಗೆ ಲೇಸನೇ ಬಯಸುವುದೇ ಧರ್ಮ".

ಧರ್ಮ ಜೀವನದ ಅವಿಭಾಜ್ಯ ಅಂಗ. ಪುರುಷಾರ್ಥಗಳಲ್ಲಿ ಮೊದಲನೆಯದು. ಮಾನವನ ಜೀವನದ ನೆಮ್ಮದಿಗೆ ಧರ್ಮವೇ ಅಡಿಗಲ್ಲು. ಧರ್ಮ ಕೂಡಿಬದುಕು ವುದನ್ನು ಕಲಿಸುತ್ತದೆ. ಧರ್ಮ ಅಪಾರವಾದ ಒಂದು ಸಾಗರ. ಮಾನವ ಜೀವನ ವನ್ನು ಶ್ರೀಮಂತವೂ, ವೈವಿಧ್ಯಪೂರ್ಣವೂ, ವಿಚಾರ ಸಮನ್ವಿತವೂ, ಆಚಾರ ನಿಷ್ಠವೂ ಆಗುವಂತೆ ಬೆಳೆಸುವ ಒಂದು ವಿಶಿಷ್ಟ ಶಕ್ತಿ ಅದು. ಜನಜೀವನವನ್ನು ಹಸನುಗೊಳಿಸುವುದೇ ಅದರ ಉದ್ದೇಶ. ಸಹಬಾಳ್ವೆ ಅದರ ಮೂಲ ಮಂತ್ರ. "ಓಂ ಸಹನಾವವತು, ಸಹನೌ ಭುನಕ್ತು, ಸಹವೀರ್ಯಂ ಕರವಾವಹೈ ತೇಜಸ್ವಿನಾವಧೀತಮಸ್ತು, ಮಾವಿದ್ವಿಷಾವಹೈ, ಓಂ ಶಾಂತಿಃ ಶಾಂತಿಃ ಶಾಂತಿಃ" ಎಂದೇ ನಿತ್ಯ ಪ್ರಾರ್ಥನೆ. ಭಗವಾನ್ ಬಸವಣ್ಣನವರು ಹೇಳಿದಂತೆ "ಇವನಾರವ ಇವನಾರವ ಇವನಾರವನೆಂದೆನಿಸದಿರಯ್ಯಾ, ಇವ ನಮ್ಮವ ಇವ ನಮ್ಮವ ಇವ ನಮ್ಮವನೆಂದೆನಿಸಯ್ಯಾ" ಎಂಬುದು ಧರ್ಮ.

ಮಾನವನ ಉಸಿರಿನಂತೆ ಧರ್ಮ ಉದಿಸಿತು. ಶ್ರುತಿ, ಸ್ಮೃತಿ, ಸದಾಚಾರ, ಮತ್ತು ಆತ್ಮ ಪ್ರಿಯಗಳು ಧರ್ಮದ ಲಕ್ಷಣಗಳೆನಿಸಿದರೆ ದಯೆ, ದುಡಿಮೆ, ಸಮಾನತೆ, ಪಾವಿತ್ರ್ಯತೆ, ಪರಿಶುದ್ಧ ಜೀವನ ವಿಧಾನ ಧರ್ಮದ ಅಂಗಗಳೆನಿಸಿದುವು.

ಧರ್ಮದ ದೀವಿಗೆ ಸದಾ ಬೆಳಗುವಂತೆ ನೋಡಿಕೊಳ್ಳುವುದಕ್ಕಾಗಿ ಮಾಡಿ ಕೊಂಡ ವ್ಯವಸ್ಥೆ ಮಠ-ಮಾನ್ಯಗಳ ಉದಯಕ್ಕೆ ಕಾರಣವಾಯಿತು. ಧರ್ಮ ಮತ್ತು ಮಠಗಳಿಗೆ ಇರುವ ಸಂಬಂಧ ಅತ್ಯಂತ ನಿಕಟವಾದುದು. ಅವುಗಳ ಉದ್ದೇಶ ಧರ್ಮಪ್ರಜ್ಞೆಯ ಉದ್ದೀಪನ, ಆಚರಣೆಯ ಮಾರ್ಗದರ್ಶನ. ಮಠಮಾನ್ಯಗಳು ಜಗ ತ್ತಿನ ಎಲ್ಲ ಧರ್ಮಗಳಲ್ಲೂ ಒಂದಲ್ಲ ಒಂದು ರೂಪದಲ್ಲಿ ಕಾಣಿಸಿಕೊಂಡಿವೆ; ಮತ್ತು ಆ ಧರ್ಮಗಳ ಸಂಪತ್ತು ಎನಿಸಿವೆ. ಅಂತೆಯೇ ವೀರಶೈವಧರ್ಮದಲ್ಲಿಯೂ ಮಠ ಗಳು ಮೂಡಿಬಂದಿವೆ; ಸೇವಾ ಜೀವನಕ್ಕೆ ತಮ್ಮನ್ನು ಅರ್ಪಿಸಿಕೊಂಡಿವೆ.

ವೀರಶೈವಧರ್ಮ ಇಹಪರ ಎಂಬ ಭೇದವನ್ನು ಮೀರಿ ಬೆಳೆದದ್ದು, ವ್ಯಕ್ತಿ ಸಮಾಜವನ್ನು ಅಭಿನ್ನವಾಗಿ ಕಂಡದ್ದು. ವಿಚಾರವಷ್ಟೇ ಆಚಾರವೂ ಅಗತ್ಯ ಎಂಬು ದನ್ನು ಒತ್ತಿ ಹೇಳಿದ್ದು. ಅದಕ್ಕಾಗಿ ವೀರಶೈವಧರ್ಮದಲ್ಲಿ ಸಾಮಾಜಿಕ ಜೀವನಕ್ಕೆ ಅಗತ್ಯವಾದ ನೀತಿನಿಯಮಗಳ ಬೋಧನೆಯಲ್ಲದೆ, ನಿತ್ಯ ಜೀವನದಲ್ಲಿ ಅವುಗಳ ಪರಿಪಾಲನೆಯ ಅಗತ್ಯವನ್ನೂ ತಿಳಿಸಿ, ಅದರ ಮೇಲ್ವಿಚಾರಣೆಗೆ "ಕಾಯಕದ ಸ್ವಾಮಿ" ಎಂಬ ಒಂದು ಸಂಸ್ಥೆಯನ್ನು ರೂಪಿಸಿದ ಅದ್ವಿತೀಯ, ಅಮೂಲ್ಯ ಕೀರ್ತಿಯು ವೀರಶೈವಧರ್ಮಕ್ಕೆ ಸೇರಿದೆ ಎಂದರೆ ಅದು ಉತ್ಪ್ರೇಕ್ಷೆಯಲ್ಲ. ಹಾಗಾಗಿ ವೀರಶೈವ ಸಮಾಜದಲ್ಲಿ ಮಠಗಳ ಪಾತ್ರವು ಅದ್ವಿತೀಯವಾಗಿದೆ. ತನ್ನದೇ ಆದ ಸ್ವತಂತ್ರ ದರ್ಶನ ಮತ್ತು ಆಚರಣೆಯ ಆಧಾರದ ಮೇಲೆ ರೂಪಿತವಾದವು ವೀರಶೈವ ಮಠ



ಗಳು. ಅನುಭವಪ್ರಧಾನವಾದ, ಆಚಾರ ವಿಚಾರಗಳ ಸಮನ್ವಯದ, ಕಾಯಕ ದಾಸೋಹಗಳ ಅಖಂಡ ದೃಷ್ಟಿಯ, ವ್ಯಷ್ಟಿ ಸಮಷ್ಟಿಯ ಪೂರ್ಣತ್ವದ ತಾತ್ವಿಕ ಜಿಜ್ಞಾಸೆ ಸಾಧನೆಯ ವಾಸ್ತವಿಕ ಭೂಮಿಕೆಯ, ಅಂಗ ಲಿಂಗ ಸಾಮರಸ್ಯದ ಮೂಲ ಭೂತಲಕ್ಷಣಗಳೊಂದಿಗೆ ವರ್ಗವರ್ಣಗಳನ್ನು ತೊರೆದು ನಿಂತು, ಹೆಣ್ಣು ಗಂಡು ಎಂಬ ಭಾವಮರೆತು, ಸಕಲ ಜೀವರಿಗೆ ಲೇಸನ್ನೇ ಬಯಸುವ ವಿಶಾಲ ಮನೋಧರ್ಮದ ಆಧಾರದ ಮೇಲೆ ಮೂಡಿಬಂದ ಧರ್ಮಮಂದಿರಗಳು ವೀರಶೈವ ಮಠಗಳು.

ವೀರಶೈವ ಮಠಗಳಿಗೆ ಅಧಿಪತಿಗಳಾಗಿ ಬಂದವರು ವಿರಕ್ತರು, ಆಚಾರ್ಯರು, ಶರಣರು. ವಿರಕ್ತ ಎಂದರೆ ಸದ್ಗುಣಗಳಲ್ಲಿ ಶಿಕ್ಷಣ ಪಡೆದವನು ಎಂದರ್ಥ. ಆತ್ಮ ವ್ಯಾಮೋಹವನ್ನು ತೊರೆದವನು. ಪೂರ್ವಾಶ್ರಮದ ಬಾಂಧವ್ಯವನ್ನು ಕಳಚಿಕೊಂಡವನು. ಅಂಥ ವ್ಯಾಮೋಹದಿಂದ ಮುಕ್ತನಾದವನು. ಆ ಶಿಕ್ಷಣದ ಗುರಿ ಎರಡು, ಒಳ್ಳೆಯ ವುಗಳಲ್ಲಿ ಕಿರಿದಾದುದನ್ನು ಬಿಟ್ಟು ಹಿರಿದಾದ ಒಳ್ಳೆಯದನ್ನು ಆರಿಸಿಕೊಳ್ಳುವ ಶಕ್ತಿ. ಅಲ್ಲದೆ ಯಾವುದೇ ಧರ್ಮದ ಮಠಾಧಿಪತಿಯಾದರೂ ಬ್ರಹ್ಮಚರ್ಯ, ಜಿತೇಂದ್ರಿ ಯತ್ವ ಮತ್ತು ಸರಳಜೀವನಕ್ಕೆ ಮಹತ್ವಕೊಟ್ಟದ್ದು ಇತಿಹಾಸದಿಂದ ವ್ಯಕ್ತವಾಗುತ್ತದೆ.

ವೈಶಿಷ್ಟ್ಯವೆಂದರೆ ವೀರಶೈವಧರ್ಮದಲ್ಲಿ ಇಹಪರಗಳ ಗೊಂದಲವಿಲ್ಲ, ಇದರ ಗುರಿ ಇಹಪರ ಸಮನ್ವಯ ಸಾಧನೆ: "ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರು" ಎಂಬ ಆತ್ಮವಿಶ್ವಾಸ. ಜೀವನೋತ್ಕರ್ಷವೆ ಧರ್ಮದ ಗುರಿಯೆಂದು ಶರಣರು ಭಾವಿ ಸಿದರು. ಲೌಕಿಕ ಜೀವನವು ಒಂದು ಶ್ರೇಯೋವಕಾಶ. ಲೌಕಿಕ ಜೀವನವು ಆಧ್ಯಾ ತ್ಮಿಕ ಜೀವನದಿಂದ ಪ್ರತ್ಯೇಕವಾದುದಲ್ಲ. ಇದು ಅಪೂರ್ಣವಾದ ನಿಲವು. ಜೀವ ನವನ್ನು ಅರ್ಥಪೂರ್ಣವನ್ನಾಗಿಸುವಲ್ಲಿ, ಸಂಪದ್ಯುಕ್ತವನ್ನಾಗಿಸುವಲ್ಲಿ ವೀರಶೈವಮಠ ಗಳು ಸಕ್ರಿಯವಾಗಿ ಕಾಲಕಾಲಕ್ಕೆ ಶ್ರಮಿಸುತ್ತ ಬಂದಿವೆ.

ಕರ್ನಾಟಕದ ವೀರಶೈವ ಪರಂಪರೆ ಶ್ರೀಮಂತವಾದದ್ದು. ವ್ಯಕ್ತಿಯ ಸಾಧ ನೆಯ ವ್ಯಾಪಕತೆಯನ್ನು, ವೈವಿಧ್ಯವನ್ನು, ವೈಶಿಷ್ಟ್ಯವನ್ನು ಕಂಡುಕೊಳ್ಳಬೇಕೆಂಬುದು ಈ ಮಠಗಳ ಸ್ಥಾಪನೆಯಲ್ಲಿ ಕಂಡುಬರುವ ಆಶಯ. ಬಸವಾದಿ ಶರಣರು ಜಗ ತ್ತಿಗೆ ಆಚರಿಸಿ ತೋರಿಸಿದ ಜೀವನ ತತ್ವಗಳು, ಮಾನವ ಜೀವನವನ್ನು ಕಲ್ಯಾಣ ಪಥದಲ್ಲಿ ನಡೆಯುವಂತೆ ಮಾರ್ಗದರ್ಶನ ಮಾಡಬೇಕಾದದ್ದು ಈ ಮಠಗಳ ಕರ್ತವ್ಯ. ಕಾಲಕಾಲಕ್ಕೆ ಈ ಮಠಾಧಿಪತಿಗಳಾಗಿ ಬಂದವರು ತಮ್ಮ ಯುಗಧರ್ಮದ ಹಠ ಹತ್ತನ್ನು, ಪರಿಮಿತಿಯನ್ನೂ ಮೀರಿಬೆಳೆದು ತಮ್ಮ ಮಹೋನ್ನತ ಜೀವನದಿಂದ, ವೈಯಕ್ತಿಕ ಪರಿಶುದ್ಧ ಚಾರಿತ್ರ್ಯದಿಂದ, ಶ್ರೋತ್ರಿಯತ್ವ, ಪ್ರಕಾಂಡವಿದ್ವತ್ತು, ಅನು ಪಮವಾದ ದಯಾರ್ದ್ರ ಹೃದಯವಂತಿಕೆಗಳಿಂದ ಜನಜೀವನಕ್ಕೆ ಒಂದು ಸಾರ್ವ ಕಾಲಿಕ ಸಾಂಸ್ಕೃತಿಕ ಘನತೆಗೌರವಗಳನ್ನು ತಂದುಕೊಟ್ಟರು. ಕೇವಲ ವೀರಶೈವ

ಸಮಾಜದ ಅಭಿವೃದ್ಧಿಯೊಂದೇ ತಮ್ಮ ಜೀವನದ ಸಾರ್ಥಕತೆ ಎಂದು ಬಗೆಯದೆ ಅನ್ಯಸಮಾಜಗಳ ಪುರೋಭಿವೃದ್ಧಿಗೂ ತಮ್ಮ ಜೀವನವನ್ನು ಸವೆಸಿದರು. ಅವರು ಒಂದು ಕಾಲದಲ್ಲಿದ್ದರೂ ಆ ಕಾಲವನ್ನು ಮೀರಿ ಬೆಳೆದವರು. ಒಂದು ಧರ್ಮದ ಪಂಜರದಲ್ಲಿದ್ದರೂ ಅದನ್ನು ದಾಟಿದವರು. ಎಲ್ಲ ಕಾಲಕ್ಕೂ ಅನ್ವಯವಾಗುವ ಮಾನವ ಧರ್ಮದ ಮೂಲಮೌಲ್ಯಗಳನ್ನು ಜೀವನದಲ್ಲಿ ಸಾಧಿಸಿ ತೋರಿಸಿದ ಅನುಭಾವಿಗಳು. ಪವಾಡಪುರುಷರೆನಿಸಿದರೂ ಪವಾಡಗಳಿಗೆ ಸೀಮಿತವಾಗಿರದೆ ಅದನ್ನು ಗೆದ್ದು ಆಧ್ಯಾತ್ಮಿಕ ವ್ಯಕ್ತಿತ್ವದಿಂದ ಜನತೆಯನ್ನು ಜಾಗೃತಗೊಳಿಸಿದ ದಿವ್ಯದೃಷ್ಟಿಯುಳ್ಳವರು. ಆ ಮಠಾಧಿಪತಿಗಳ ಆಚಾರ-ವಿಚಾರ, ಜೀವನದೃಷ್ಟಿ, ಲಿಂಗಾಪೂಜಾನಿಷ್ಠೆ, ನೈಷ್ಠಿಕ ಬ್ರಹ್ಮಚರ್ಯಪಾಲನೆ, ಸಮಾಜಸೇವೆ, ಕಾಯಕಶ್ರದ್ಧೆ, ಲೋಕ ಸಂಗ್ರಹ ಚಳ್ಳಿಗಳಿಂದಾಗಿ ವೀರಶೈವಮಠಗಳು ಆದರ್ಶಪ್ರಾಯವೆನಿಸಿದುವು, ಸರ್ವ ಜನಾದರಣೀಯವಾದವು. ಅದಕ್ಕೂ ಹೆಚ್ಚಿನದಾಗಿ ಮಠಾಧಿಪತಿಗಳಿಗೆ ಅಭೂತಪೂರ್ವವಾದ ಮನ್ನಣೆಯನ್ನು ತಂದುಕೊಟ್ಟವು. ಒಂದು ಮಾತಿನಲ್ಲಿ ಹೇಳಬಹುದಾದರೆ ಬಸವಾದಿ ಶರಣರು ಬೋಧಿಸಿದ ತತ್ವಗಳಿಗೆ ಪ್ರಯೋಗಶಾಲೆಗಳಾಗಿ ಬಂದವು ಈ ಮಠಗಳು.

ಸಮಾಜದ ದೌರ್ಭಾಗ್ಯವೆಂದರೆ ಉನ್ನತ ಪರಂಪರೆಯನ್ನು ಬೆಳೆಸಿಕೊಂಡು ಬಂದ ಮಠಮಾನ್ಯಗಳಿಗೆ ಕಾಲಾನುಕ್ರಮದಲ್ಲಿ ಬರುತ್ತಿರುವ ಮಠಾಧಿಪತಿಗಳ ವೈಯಕ್ತಿಕ ಚಾರಿತ್ರ್ಯಶುದ್ಧಿಯ ಅಭಾವದಿಂದಾಗಿ, ಜೀವನಕ್ರಮದಿಂದಾಗಿ ತಮಗಿದ್ದ ಗೌರವಾದರಗಳನ್ನು ದಿನೇದಿನೇ ಕಳೆದುಕೊಳ್ಳುತ್ತಿರುವುದು ಬ್ರಹ್ಮಚರ್ಯ ಪಾಲನೆಯಲ್ಲಿ ಶಿಥಿಲವಾಗುತ್ತಿರುವುದಂತೂ ತುಂಬಾ ಶೋಚನೀಯ. ಬ್ರಹ್ಮಚರ್ಯ ಪಾಲನೆಗೆ ಅತಿಮುಖ್ಯವಾಗಿ ಆಹಾರದಲ್ಲಿ ನಿಯಮ ನಿಷ್ಠೆಗಳು ಅಗತ್ಯ, ಮತ್ತು ಮನೋನಿಗ್ರಹ ಅಷ್ಟೇಮುಖ್ಯ. ಏಕೆಂದರೆ "ವಿಶ್ವಾಮಿತ್ರ ಪರಾಶರ ಪ್ರಭೃತಯೋ ವಾತಾಂಬುಪರ್ಣಾಶನಾಃ । ತೇಽಪಿ ಸ್ತ್ರೀಮುಖ ಪಂಕಜಂ ಸುಲಲಿತಂ ದೃಷ್ಟ್ವೈವ ಮೋಹಂ ಗತಾಃ । ಶಾಲ್ಯನ್ನಂ ಸಘೃತಂ ಪಯೋದಧಿಯುತಂ ಯೇ ಭುಂಜತೇ ಮಾನವಾಃ । ತೇಷಾಮಿಂದ್ರಿಯ ನಿಗ್ರಹೋ ಯದಿ ಭವೇತ್ ವಿಂಧ್ಯಃ ಪ್ಲವೇತ್ಸಾಗರೇ ॥ ವಿಶ್ವಾಮಿತ್ರ ಪರಾಶರ ಮೊದಲಾದ ಋಷಿಗಳು ಗಾಳಿ, ನೀರು, ಮತ್ತು ಎಲೆಗಳನ್ನು ಸೇವಿಸುತ್ತಿದ್ದರೂ ಕೂಡ ಸ್ತ್ರೀಯರ ಸುಂದರ ಮುಖದರ್ಶನಮಾತ್ರದಿಂದಲೇ ಮೋಹಿತರಾದರು. ಹೀಗಿರುವಾಗ ಹಾಲುತುಪ್ಪ ಮೊಸರಿನಿಂದ ಕೂಡಿದ ಮೃಷ್ಟಾನ್ನ ಭೋಜನ ಮಾಡುವ ಮನುಷ್ಯರು ತಮ್ಮ ಇಂದ್ರಿಯ ನಿಗ್ರಹವನ್ನು ಮಾಡುತ್ತಾರೆಂಬುದು ಸಮುದ್ರದಲ್ಲಿ ವಿಂಧ್ಯಪರ್ವತ ತೇಲಿದಂತೆ. ಆದುದರಿಂದ ಪ್ರಸಾದದಲ್ಲಿ ತುಂಬ ಎಚ್ಚರ, ಸಂಯಮಗಳು ಮಠಾಧಿಪತಿಗಳಿಗೆ ಅಗತ್ಯ. ಆದರೆ ಇಂದು ಪ್ರಾಪಂಚಿಕರಿಗಿಂತಲೂ ಮಠಾಧಿಪತಿಗಳು ಈ ಪ್ರಸಾದನಿಷ್ಠೆಯಲ್ಲಿ



ಜಾರುತ್ತಿರುವುದು ದುರ್ದೈವ. "ವೇಧಾದ್ವೇಧಾ ಭ್ರಮಂ ಚಕ್ರೇ ಕಾಂತಾಸು ಕನಕೇಷು ಚ, ತಾಸು ತೇಷ್ವಪ್ಯನಾಸಕ್ತಃ ಸಾಕ್ಷಾತ್ ಭರ್ಗೋ ನರಾಕೃತಿಃ ॥ ಬ್ರಹ್ಮನು ಹೆಣ್ಣು ಮತ್ತು ಹೊನ್ನುಗಳಲ್ಲಿ ಮೋಹವನ್ನುಂಟುಮಾಡಿದನು. ಇವುಗಳಲ್ಲಿ ಯಾರು ನಿರಾಸಕ್ತರೋ ಅವರು ಮನುಷ್ಯರೂಪದ ಪ್ರತ್ಯಕ್ಷ ಪರಮಾತ್ಮನೇ ಸರಿ-ಎಂಬುದನ್ನು ಮನನ ಮಾಡುತ್ತಿಲ್ಲ. ಆಚರಣೆಯಲ್ಲಿಟ್ಟುಕೊಳ್ಳುತ್ತಿಲ್ಲ ಇದಕ್ಕೆ ಬದಲಾಗಿ ಇಂದು ನಡೆದಿರುವುದೇ ಕಂಡುಬರುತ್ತಿದೆ. "ಶರಣನಾರಿಗಂಜ" ಎಂಬ ದಿಟ್ಟನಿಲವನ್ನು ಪ್ರತಿಪಾದಿಸಬೇಕಾದ ಮಠಾಧಿಪತಿಗಳೇ ರಾಜಕಾರಣಿಗಳ, ಭ್ರಷ್ಟಮುಖಂಡರ, ಸ್ವಾರ್ಥಿಗಳ, ಗಣ್ಯರೆನಿಸಿದವರ ಮರ್ಜಿದರ್ಜಿಗಳಿಗೆ ಕಿವಿಗೊಡುವಂತಾಗಿರುವುದು ದುಃಖಕರ. ಕರ್ನಾಟಕದಲ್ಲಿರುವ ಸಹಸ್ರಾರು ವೀರಶೈವ ಮಠಗಳಲ್ಲಿ ಕೆಲವೇ ಮಠಗಳು ಪವಿತ್ರವಾದ ಪರಂಪರೆಯನ್ನು ಉಳಿಸಿಕೊಂಡು ಸ್ವಾಮಿತ್ವದ ಆದರ್ಶತೆಯನ್ನು ಕಾಪಾಡಿಕೊಂಡಿರುವುದು ಅಭಿಮಾನಾಸ್ಪದವಾದ ಸಂಗತಿ. ಈ ಉಜ್ವಲವಾದ ಪರಂಪರೆಗೆ ವಿಚ್ಛಿತ್ತಿ ಬರದಂತೆ ಕಾಪಾಡಿಕೊಳ್ಳುವುದು ಈ ಮಠಗಳ ಗದ್ದುಗೆಗಳನ್ನೇರುವ ಸ್ವಾಮಿಗಳ ಮುಖ್ಯವಾದ ಕರ್ತವ್ಯ. ಈ ಬಗ್ಗೆ ಸಾಕಷ್ಟು ಗಮನ ಕೊಡುವುದು ಸಮಾಜಬಾಂಧವರ ಕರ್ತವ್ಯ. ಯಾರೇ ಆಗಲಿ ಇಂತಹ ಮಠಗಳಿಗೆ ನೇಮಿಸಿರತಕ್ಕ ಸ್ವಾಮಿಗಳು ಬ್ರಹ್ಮಚರ್ಯ ಕಾಪಾಡಿಕೊಂಡು ಪರಂಪರೆಯನ್ನು ರಕ್ಷಣೆಮಾಡುವ ಶಕ್ತಿಯಿಲ್ಲದಿದ್ದರೆ ತಾವೇ ಸ್ಥಾನವನ್ನು ಬಿಟ್ಟುಕೊಟ್ಟು ಮಠದ ಧವಳ ಕೀರ್ತಿಯನ್ನು ಬೆಳೆಸುವ ಔದಾರ್ಯವನ್ನು ವ್ಯಕ್ತಪಡಿಸಿ ಸಮಾಜ ಬಾಂಧವರ ಗೌರವವನ್ನು ಗಳಿಸಿಕೊಳ್ಳುವುದು ಸೂಕ್ತ. ಸಮಾಜ ಬಾಂಧವರು ಯಾವುದೇ ವಿಧವಾದ ವೈಯಕ್ತಿಕ ಅಭಿಮಾನ, ಸ್ವಾರ್ಥಪರತೆ, ಸಂಕುಚಿತ ಭಾವನೆಗಳಿಗೆ ಎಡೆಗೊಡದೆ ಪ್ರಾಂಜಲ ಮನಸ್ಸಿನಿಂದ, ತಾತ್ವಿಕ ದೃಷ್ಟಿಯಿಂದ ಪರಿಶೀಲಿಸಿ ಮಠಗಳ ಘನತೆ, ಗೌರವ ಪಾವಿತ್ರ್ಯಗಳನ್ನೆತ್ತಿ ಹಿಡಿಯಲು ಅನುಕೂಲಕರ ವಾತಾವರಣವನ್ನು ಸೃಷ್ಟಿಸಿದರೆ ಮಹದುಪಕಾರವಾಗುತ್ತದೆ.

ವೀರಶೈವಧರ್ಮ ಸ್ವತಂತ್ರ ವಿಚಾರ ಶೀಲತೆಗೆ ಮಹತ್ವಕೊಟ್ಟದ್ದು. ಅಂಧಶ್ರದ್ಧೆಗೆ ಅದು ಪುರಸ್ಕಾರ ನೀಡಲಿಲ್ಲ. ವೇಶಕ್ಕೆ ಮೋಸಹೋದುದಲ್ಲ. ಬಾಹ್ಯ ಲಾಂಛನಗಳಿಗೆ ಬಾಗಿದುದಲ್ಲ. ಅಂತರಂಗದ ಶುದ್ಧಿಗೆ ಬೆಲೆಕೊಟ್ಟದ್ದು. "ಸತ್ಯವನೂ ಅಸತ್ಯವನು ಪ್ರತ್ಯಕ್ಷ ಪ್ರಮಾಣಿಸಿಯಲ್ಲದೆ ನಿಶ್ಚಯವನರಿಯಬಾರದು. ಗುರುವಾದಡೂ ಲಿಂಗವಾದಡೂ ಜಂಗಮವಾದಡೂ ಪರೀಕ್ಷಿಸಿ ಹಿಡಿಯುದವನ ಭಕ್ತಿ ವಿರಕ್ತಿ ತೂತು ಕುಂಬದಲ್ಲಿಯ ನೀರು, ಸೂತ್ರ ತಪ್ಪಿದ ಬೊಂಬೆ, ನಿಜನೇತ್ರ ತಪ್ಪಿದ ದೃಷ್ಟಿ." ಗುರುಲಿಂಗ ಜಂಗಮದಲ್ಲಿಯೂ ಗುಣಲಕ್ಷಣ ವಿರಕ್ತಿಗಳನ್ನು ನೋಡಲೇ ಬೇಕೆಂಬ ದೃಷ್ಟಿ ಇಂದು ಅನಿವಾರ್ಯಸತ್ಯವಾಗಬೇಕು. ಆ ಯೋಗ್ಯತೆಯನ್ನು ಪಡೆದವರುಮಾತ್ರ ಸಮಾಜದ ಗೌರವಕ್ಕೆ ಪಾತ್ರರಾಗುತ್ತಾರೆ. ಪರುಷ ಪರಿಶುದ್ಧವಾಗಿದ್ದರೆ ಮಾತ್ರ ಅದು ಮುಟ್ಟಿದುದನ್ನು ಚಿನ್ನವನ್ನಾಗಿ ಮಾಡಬಲ್ಲುದಲ್ಲವೆ ?

—ಧರ್ಮಾಭಿಮಾನಿ

ಆಪ್ಯಾಯನಕ್ಕೆ ನೀಡುವೆ ಲಾಂಛನಕ್ಕೆ ಶರಣೆಂಬೆ
ಲಾಂಛನಕ್ಕೆ ತಕ್ಕ ಆಚರಣೆಯಿಲ್ಲದಿದ್ದರೆ
ಕೂಡಲ ಸಂಗಮದೇವ ನೀ ಸಾಕ್ಷಿಯಾಗಿ ಛೀಯೆಂಬೆ.

❁ ❁ ❁

ಗುರುಕಾರುಣ್ಯವೆ ಸದಾಚಾರ, ಗುರುಕಾರುಣ್ಯವೆ
ಶಿವಾಚಾರ, ಗುರುಕಾರುಣ್ಯವೆ ಪ್ರಸಾದ ರುಚಿ!
ಮುಂದೆ ಗುರು, ಹಿಂದೆ ಲಿಂಗ ಕೂಡಲ ಸಂಗಮದೇವಾ.

❁ ❁ ❁

ಅಧರ ತಾಗುವ ರುಚಿಯು, ಉದರ ತಾಗುವ
ಸುಖವ! ಲಿಂಗಾರ್ಪಿತವಿಲ್ಲದೆ ಕೊಂಡರೆ ಕಿಲ್ಬಿಷ ನೋಡಾ!
ನೇತ್ರ, ಶ್ರೋತ್ರ, ಜಿಹ್ವೆ, ಘ್ರಾಣ, ತ್ವಕ್ಕು
ಮೊದಲಾದ ಸರ್ವೇಂದ್ರಿಯಂಗಳಲ್ಲಿ ಮುಟ್ಟಿದ ಸಕಲ
ಪದಾರ್ಥಗಳೆಲ್ಲವನ್ನು ಲಿಂಗಕ್ಕೆ ಕೊಟ್ಟು ಕೊಂಡರೆ,
ಅದು ಮಹಾಪ್ರಸಾದವಯ್ಯಾ, ಕೂಡಲ ಸಂಗಮದೇವಾ

❁ ❁ ❁

ಅಯ್ಯಾ, ಸಜ್ಜನ ಸದ್ಭಾವರ ಸಂಗದಿಂದ
ಮಹಾನುಭಾವರ ಕಾಣಬಹುದಯ್ಯಾ,
ಮಹಾನುಭಾವರ ಸಂಗದಿಂದ ಶ್ರೀ ಗುರುವನರಿಯಬಹುದು,
ಲಿಂಗವನರಿಯಬಹುದು, ಜಂಗಮವನರಿಯಬಹುದು,
ಪ್ರಸಾದವನರಿಯಬಹುದು, ತನ್ನ ತಾನರಿಯಬಹುದು.
ಅದು ಕಾರಣ ಸದ್ಭಕ್ತರ ಸಂಗವನೆ ಕರುಣಿಸು
ಕೂಡಲ ಸಂಗಮದೇವಾ ನಿಮ್ಮ ಧರ್ಮ ॥

# ಧರ್ಮ ಮತ್ತು ಮಠಾಧಿಪತಿಗಳು

ಜೀವನದ ಪರಿಪೂರ್ಣತೆಗೆ ಧರ್ಮ ಅನಿವಾರ್ಯ. ಧರ್ಮ ರಹಿತವಾದ ಮಾನವ ಸಮಾಜವನ್ನು ಬಹುಶಃ ಇತಿಹಾಸ ಕಾಣಲಾರದು. ಬಿದ್ದವನನ್ನು, ಬೀಳುತ್ತಿರುವವನನ್ನು, ಬೀಳಲಿರುವವನನ್ನು ಎತ್ತಿ ಹಿಡಿಯುವುದೇ ಧರ್ಮ. "ಪತಿತಂ ಪತಂತಂ ಪತಿಷ್ಯಂತಂ ವಾ ಉದ್ಧೃತ್ಯ ಧರತೀತಿ ಧರ್ಮಃ" ಎಂದೇ ಉಪನಿಷತ್ ವಾಣಿ ಮೊಳಗುತ್ತದೆ. ವ್ಯಕ್ತಿ ನೈತಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ಧಾರ್ಮಿಕವಾಗಿ, ಚಾರಿತ್ರ್ಯಶುದ್ಧಿಯಲ್ಲಿ ಉದ್ಧಾರವಾಗುವಂತೆ ಎತ್ತಿ ಹಿಡಿಯುವುದೇ ಧರ್ಮ. "ಧ್ರಿಯತೇ ಅನೇನ ಇತಿ ಧರ್ಮಃ"; "ಧಾರಣಾದ್ಧರ್ಮಮಿತ್ಯಾಹುಃ" ಮೊದಲಾದ ಮಾತುಗಳೂ ಇದನ್ನೇ ಸೂಚಿಸುತ್ತವೆ. ಧರಿಸುವುದರಿಂದ ಧರ್ಮ. ಧರ್ಮವು ಪ್ರಜೆಗಳನ್ನು ಧರಿಸುತ್ತದೆ. ಯಾವುದರಲ್ಲಿ ಧಾರಣೆಯುಂಟೋ ಅದು ಧರ್ಮವೆಂದು ನಿಶ್ಚಯ. ಧರ್ಮಕ್ಕೆ ಮನುಸ್ಮೃತಿ ಹೀಗೆ ಲಕ್ಷಣಗಳನ್ನು ನಿರೂಪಿಸುತ್ತದೆ" ಧೃತಿಃ ಕ್ಷಮಾ ದಮೋಽಸ್ತೇಯಂ ಶೌಚಮಿಂದ್ರಿಯ ನಿಗ್ರಹಃ । ಧೀರ್ವಿದ್ಯಾ ಸತ್ಯಮಕ್ರೋಧೋ ದಶಕಂ ಧರ್ಮ ಲಕ್ಷಣಂ ।'' ತೃಪ್ತಿ, ತಾಳ್ಮೆ, ಮನಸ್ಸನ್ನು ನಿಗ್ರಹಿಸುವುದು, ಶುಚಿಜೀವನ, ಇಂದ್ರಿಯಗಳನ್ನು ವಶದಲ್ಲಿಟ್ಟುಕೊಂಡಿರುವುದು, ಶಾಸ್ತ್ರ ಪಾಂಡಿತ್ಯ, ಆತ್ಮಜ್ಞಾನ, ಸತ್ಯ, ಶಾಂತಿ ಇವು ಧರ್ಮದ ಲಕ್ಷಣಗಳು. ಅಂದರೆ ಉದ್ಧರಿಸುವಂತಹುದು ಎಂಬ ಅರ್ಥವನ್ನು ಒಟ್ಟಾರೆ ಒಪ್ಪುತ್ತದೆ ಧರ್ಮ. ವ್ಯಕ್ತಿಯನ್ನು, ಸಮಾಜವನ್ನು ಸುಸ್ಥಿತಿಯಲ್ಲಿ, ಸುವ್ಯವಸ್ಥೆಯಲ್ಲಿ ಎತ್ತಿ ಹಿಡಿಯುವ ಶಕ್ತಿ ಧರ್ಮವೆನ್ನಬಹುದು. ವ್ಯಕ್ತಿಯಲ್ಲಿರುವ ಮಾನವತೆಯನ್ನು ಕ್ರಮವಾಗಿ ಅಭಿವೃದ್ಧಿಗೊಳಿಸಿ ಮೋಕ್ಷಕ್ಕೆ ಸಾಧಕವಾದದ್ದು ಧರ್ಮ.

ಧರ್ಮ ಎಂಬ ಮಾತು ಕಾಲಕಾಲಕ್ಕೆ ಅರ್ಥ ವಿಸ್ತಾರವನ್ನು ಪಡೆಯುತ್ತಾ ಹೋಗುವುದು ಕಾಣಬಂದಿದೆ. "ಆಚಾರಃ ಪರಮೋಧರ್ಮಃ", "ಸ್ವಧರ್ಮೇ ನಿಧನಂ ಶ್ರೇಯಃ'' ಎಂಬಂಥ ಮಾತುಗಳು ಸೀಮಿತಾರ್ಥವನ್ನು ಒಳಗೊಂಡಿರುವಂತೆ ಕಾಣಬಂದರೂ ವ್ಯಾಪಕವಾದ ಅರ್ಥವಲಯವನ್ನು ಪಡೆದಿರುವುದು ಹೊಳೆಯುತ್ತದೆ. ಮತ್ತು "ಯತೋಽಭ್ಯುದಯ ನಿಶ್ರೇಯಸಃ ಸಿದ್ಧಿಸ್ಸಧರ್ಮಃ" ಎಂಬ ಮಾತಿನಲ್ಲಿ ಇಹಪರಗಳಲ್ಲಿ ಅಭ್ಯುದಯ ಮತ್ತು ನಿಶ್ರೇಯಗಳನ್ನು ಉಂಟು ಮಾಡುವುದು ಧರ್ಮವೆನ್ನುತ್ತದೆ. ಹೀಗಾಗಿ ಧರ್ಮದ ವ್ಯಾಖ್ಯೆವ್ಯಾಪ್ತಿಗಳು "ಜಗದಗಲ ಮುಗಿಲಗಲ ಮಿಗೆಯಗಲ". ಮತ್ತು "ಸಕಲ ಜೀವರಿಗೆ ಲೇಸನೇ ಬಯಸುವುದೇ ಧರ್ಮ".

ಧರ್ಮ ಜೀವನದ ಅವಿಭಾಜ್ಯ ಅಂಗ. ಪುರುಷಾರ್ಥಗಳಲ್ಲಿ ಮೊದಲನೆಯದು. ಮಾನವನ ಜೀವನದ ನೆಮ್ಮದಿಗೆ ಧರ್ಮವೇ ಅಡಿಗಲ್ಲು. ಧರ್ಮ ಕೂಡಿಬದುಕುವುದನ್ನು ಕಲಿಸುತ್ತದೆ. ಧರ್ಮ ಅಪಾರವಾದ ಒಂದು ಸಾಗರ. ಮಾನವ ಜೀವನವನ್ನು ಶ್ರೀಮಂತವೂ, ವೈವಿಧ್ಯಪೂರ್ಣವೂ, ವಿಚಾರ ಸಮನ್ವಿತವೂ, ಆಚಾರ ನಿಷ್ಠವೂ ಆಗುವಂತೆ ಬೆಳೆಸುವ ಒಂದು ವಿಶಿಷ್ಟ ಶಕ್ತಿ ಅದು. ಜನಜೀವನವನ್ನು ಹಸನುಗೊಳಿಸುವುದೇ ಅದರ ಉದ್ದೇಶ. ಸಹಬಾಳ್ವೆ ಅದರ ಮೂಲ ಮಂತ್ರ. "ಓಂ ಸಹನಾವವತು, ಸಹನೌ ಭುನಕ್ತು, ಸಹವೀರ್ಯಂ ಕರವಾವಹೈಃ ತೇಜಸ್ವಿನಾವಧೀತಮಸ್ತು, ಮಾವಿದ್ವಿಷಾವಹೈ, ಓಂ ಶಾಂತಿಃ ಶಾಂತಿಃ ಶಾಂತಿಃ" ಎಂದೇ ನಿತ್ಯ ಪ್ರಾರ್ಥನೆ. ಭಗವಾನ್ ಬಸವಣ್ಣನವರು ಹೇಳಿದಂತೆ "ಇವನಾರವ ಇವನಾರವ ಇವನಾರವನೆಂದೆನಿಸದಿರಯ್ಯಾ, ಇವನಮ್ಮವ ಇವನಮ್ಮವ ಇವನಮ್ಮವನೆಂದೆನಿಸಯ್ಯಾ" ಎಂಬುದು ಧರ್ಮ.

ಮಾನವನ ಉಸಿರಿನಂತೆ ಧರ್ಮ ಉದಿಸಿತು, ಶ್ರುತಿ, ಸ್ಮೃತಿ, ಸದಾಚಾರ, ಮತ್ತು ಆತ್ಮಪ್ರಿಯತೆಗಳು ಧರ್ಮದ ಲಕ್ಷಣಗಳೆನಿಸಿದರೆ ದಯೆ, ದುಡಿಮೆ, ಸಮಾನತೆ, ಪಾವಿತ್ರ್ಯತೆ, ಪರಿಶುದ್ಧ ಜೀವನ ವಿಧಾನ ಧರ್ಮದ ಅಂಗಗಳೆನಿಸಿದುವು.

ಧರ್ಮದ ದೀವಿಗೆ ಸದಾ ಬೆಳಗುವಂತೆ ನೋಡಿಕೊಳ್ಳುವುದಕ್ಕಾಗಿ ಮೂಡಿಕೊಂಡ ವ್ಯವಸ್ಥೆ ಮಠ-ಮಾನ್ಯಗಳ ಉದಯಕ್ಕೆ ಕಾರಣವಾಯಿತು. ಧರ್ಮ ಮತ್ತು ಮಠಗಳಿಗೆ ಇರುವ ಸಂಬಂಧ ಅತ್ಯಂತ ನಿಕಟವಾದುದು. ಅವುಗಳ ಉದ್ದೇಶ ಧರ್ಮಪ್ರಜ್ಞೆಯ ಉದ್ದೀಪನ, ಆಚರಣೆಯ ಮಾರ್ಗದರ್ಶನ, ಮಠಮಾನ್ಯಗಳು ಜಗತ್ತಿನ ಎಲ್ಲ ಧರ್ಮಗಳಲ್ಲೂ ಒಂದಲ್ಲ ಒಂದು ರೂಪದಲ್ಲಿ ಕಾಣಿಸಿಕೊಂಡಿವೆ; ಮತ್ತು ಆ ಧರ್ಮಗಳ ಸಂಪತ್ತು ಎನಿಸಿವೆ. ಅಂತೆಯೇ ವೀರಶೈವಧರ್ಮದಲ್ಲಿಯೂ ಮಠಗಳು ಮೂಡಿಬಂದಿವೆ; ಸೇವಾ ಜೀವನಕ್ಕೆ ತಮ್ಮನ್ನು ಅರ್ಪಿಸಿಕೊಂಡಿವೆ.

ವೀರಶೈವಧರ್ಮ ಇಹಪರ ಎಂಬ ಭೇದವನ್ನು ಮೀರಿ ಬೆಳೆದದ್ದು, ವ್ಯಕ್ತಿ ಸಮಾಜವನ್ನು ಅಭಿನ್ನವಾಗಿ ಕಂಡದ್ದು, ವಿಚಾರವಷ್ಟೇ ಆಚಾರವೂ ಅಗತ್ಯ ಎಂಬುದನ್ನು ಒತ್ತಿ ಹೇಳಿದ್ದು. ಆದಕ್ಕಾಗಿ ವೀರಶೈವಧರ್ಮದಲ್ಲಿ ಸಾಮಾಜಿಕ ಜೀವನಕ್ಕೆ ಅಗತ್ಯವಾದ ನೀತಿನಿಯಮಗಳ ಬೋಧನೆಯಲ್ಲದೆ, ನಿತ್ಯ ಜೀವನದಲ್ಲಿ ಅವುಗಳ ಪರಿಪಾಲನೆಯ ಅಗತ್ಯವನ್ನೂ ತಿಳಿಸಿ, ಅದರ ಮೇಲ್ವಿಚಾರಣೆಗೆ "ಕಾಯಕದ ಸ್ವಾಮಿ" ಎಂಬ ಒಂದು ಸಂಸ್ಥೆಯನ್ನು ರೂಪಿಸಿದ ಅದ್ವಿತೀಯ, ಅಮೂಲ್ಯ ಕೀರ್ತಿಯು ವೀರಶೈವಧರ್ಮಕ್ಕೆ ಸೇರಿದೆ ಎಂದರೆ ಅದು ಉತ್ಪ್ರೇಕ್ಷೆಯಲ್ಲ. ಹಾಗಾಗಿ ವೀರಶೈವ ಸಮಾಜದಲ್ಲಿ ಮಠಗಳ ಪಾತ್ರವು ಅದ್ವಿತೀಯವಾಗಿದೆ. ತನ್ನದೇ ಆದ ಸ್ವಂತ ದರ್ಶನ ಮತ್ತು ಆಚರಣೆಯ ಆಧಾರದ ಮೇಲೆ ರೂಪಿತವಾದವು ವೀರಶೈವ ಮಠ



ಗಳು. ಅನುಭವಪ್ರಧಾನವಾದ, ಆಚಾರ ವಿಚಾರಗಳ ಸಮನ್ವಯದ, ಕಾಯಕ ದಾಸೋಹಗಳ ಅಖಂಡ ದೃಷ್ಟಿಯ, ವ್ಯಷ್ಟಿ ಸಮಷ್ಟಿಯ ಪೂರ್ಣತ್ವದ ತಾತ್ವಿಕ ಜಿಜ್ಞಾಸೆ ಸಾಧನೆಯ ವಾಸ್ತವಿಕ ಭೂಮಿಕೆಯ, ಅಂಗ ಲಿಂಗ ಸಾಮರಸ್ಯದ ಮೂಲಭೂತಲಕ್ಷಣಗಳೊಂದಿಗೆ ವರ್ಗವರ್ಣಗಳನ್ನು ತೊರೆದು ನಿಂತು, ಹೆಣ್ಣು ಗಂಡು ಎಂಬ ಭಾವಮರೆತು, ಸಕಲ ಜೀವರಿಗೆ ಲೇಸನ್ನೇ ಬಯಸುವ ವಿಶಾಲ ಮನೋಧರ್ಮದ ಆಧಾರದ ಮೇಲೆ ಮೂಡಿಬಂದ ಧರ್ಮಮಂದಿರಗಳು ವೀರಶೈವ ಮಠಗಳು.

ವೀರಶೈವ ಮಠಗಳಿಗೆ ಅಧಿಪತಿಗಳಾಗಿ ಬಂದವರು ವಿರಕ್ತರು, ಆಚಾರ್ಯರು, ಶರಣರು. ವಿರಕ್ತ ಎಂದರೆ ಸದ್ಗುಣಗಳಲ್ಲಿ ಶಿಕ್ಷಣ ಪಡೆದವನು ಎಂದರ್ಥ. ಆತ್ಮ ವ್ಯಾಮೋಹವನ್ನು ತೊರೆದವನು. ಪೂರ್ವಾಶ್ರಮದ ಬಾಂಧವ್ಯವನ್ನು ಕಳಚಿಕೊಂಡವನು. ಅಂಥ ವ್ಯಾಮೋಹದಿಂದ ಮುಕ್ತನಾದವನು. ಆ ಶಿಕ್ಷಣದ ಗುರಿ ಎರಡು, ಒಳ್ಳೆಯವುಗಳಲ್ಲಿ ಕಿರಿದಾದುದನ್ನು ಬಿಟ್ಟು ಹಿರಿದಾದ ಒಳ್ಳೆಯದನ್ನು ಆರಿಸಿಕೊಳ್ಳುವ ಶಕ್ತಿ. ಅಲ್ಲದೆ ಯಾವುದೇ ಧರ್ಮದ ಮಠಾಧಿಪತಿಯಾದರೂ ಬ್ರಹ್ಮಚರ್ಯ, ಜಿತೇಂದ್ರಿಯತ್ವ ಮತ್ತು ಸರಳಜೀವನಕ್ಕೆ ಮಹತ್ವಕೊಟ್ಟದ್ದು ಇತಿಹಾಸದಿಂದ ವ್ಯಕ್ತವಾಗುತ್ತದೆ.

ವೈಶಿಷ್ಟ್ಯವೆಂದರೆ ವೀರಶೈವಧರ್ಮದಲ್ಲಿ ಇಹಪರಗಳ ಗೊಂದಲವಿಲ್ಲ, ಇದರ ಗುರಿ ಇಹಪರ ಸಮನ್ವಯ ಸಾಧನೆ. "ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರು" ಎಂಬ ಆತ್ಮವಿಶ್ವಾಸ. ಜೀವನೋತ್ಕರ್ಷವೆ ಧರ್ಮದ ಗುರಿಯೆಂದು ಶರಣರು ಭಾವಿಸಿದರು. ಲೌಕಿಕ ಜೀವನವೂ ಒಂದು ಶ್ರೇಯೋವಕಾಶ. ಲೌಕಿಕ ಜೀವನವು ಆಧ್ಯಾತ್ಮಿಕ ಜೀವನದಿಂದ ಪ್ರತ್ಯೇಕವಾದುದಲ್ಲ. ಇದು ಅಪೂರ್ಣವಾದ ನಿಲುವು. ಜೀವನವನ್ನು ಅರ್ಥಪೂರ್ಣವನ್ನಾಗಿಸುವಲ್ಲಿ, ಸಂಪದ್ಯುಕ್ತವನ್ನಾಗಿಸುವಲ್ಲಿ ವೀರಶೈವಮಠಗಳು ಸಕ್ರಿಯವಾಗಿ ಕಾಲಕಾಲಕ್ಕೆ ಶ್ರಮಿಸುತ್ತ ಬಂದಿವೆ.

ಕರ್ನಾಟಕದ ವೀರಶೈವ ಪರಂಪರೆ ಶ್ರೀಮಂತವಾದದ್ದು. ವ್ಯಕ್ತಿಯ ಸಾಧನೆಯ ವ್ಯಾಪಕತೆಯನ್ನು, ವೈವಿಧ್ಯವನ್ನು, ವೈಶಿಷ್ಟ್ಯವನ್ನು ಕಂಡುಕೊಳ್ಳಬೇಕೆಂಬುದೇ ಈ ಮಠಗಳ ಸ್ಥಾಪನೆಯಲ್ಲಿ ಕಂಡುಬರುವ ಆಶಯ. ಬಸವಾದಿ ಶರಣರು ಜಗತ್ತಿಗೆ ಆಚರಿಸಿ ತೋರಿಸಿದ ಜೀವನ ತತ್ವಗಳು, ಮಾನವ ಜೀವನವನ್ನು ಕಲ್ಯಾಣ ಪಥದಲ್ಲಿ ನಡೆಯುವಂತೆ ಮಾರ್ಗದರ್ಶನ ಮಾಡಬೇಕಾದದ್ದು ಈ ಮಠಗಳ ಕರ್ತವ್ಯ. ಕಾಲಕಾಲಕ್ಕೆ ಈ ಮಠಾಧಿಪತಿಗಳಾಗಿ ಬಂದವರು ತಮ್ಮ ಯುಗಧರ್ಮದ ಹಕಹನ್ನೂ, ಪರಿಮಿತಿಯನ್ನೂ ಮೀರಿಬೆಳೆದು ತಮ್ಮ ಮಹೋನ್ನತ ಜೀವನದಿಂದ, ವೈಯಕ್ತಿಕ ಪರಿಶುದ್ಧ ಚಾರಿತ್ರ್ಯದಿಂದ, ಶ್ರೋತ್ರಿಯತ್ವ, ಪ್ರಕಾಂಡವಿದ್ವತ್ತು, ಅನುಪಮವಾದ ದಯಾರ್ದ್ರ ಹೃದಯವಂತಿಕೆಗಳಿಂದ ಜನಜೀವನಕ್ಕೆ ಒಂದು ಸಾರ್ವಕಾಲಿಕ ಸಾಂಸ್ಕೃತಿಕ ಘನತೆಗೌರವಗಳನ್ನು ತಂದುಕೊಟ್ಟರು. ಕೇವಲ ವೀರಶೈವ

ಸಮಾಜದ ಅಭಿವೃದ್ಧಿಯೊಂದೇ ತಮ್ಮ ಜೀವನದ ಸಾರ್ಥಕತೆ ಎಂದು ಬಗೆಯದೆ ಅನ್ಯಸಮಾಜಗಳ ಪುರೋಭಿವೃದ್ಧಿಗೂ ತಮ್ಮ ಜೀವನವನ್ನು ಸವೆಸಿದರು. ಅವರು ಒಂದು ಕಾಲದಲ್ಲಿದ್ದರೂ ಆ ಕಾಲವನ್ನು ಮೀರಿ ಬೆಳೆದವರು. ಒಂದು ಧರ್ಮದ ಪರಿಸರದಲ್ಲಿದ್ದರೂ ಅದನ್ನು ದಾಟಿದವರು. ಎಲ್ಲ ಕಾಲಕ್ಕೂ ಅನ್ವಯವಾಗುವ ಮಾನವ ಧರ್ಮದ ಮೌಲ್ಯಗಳನ್ನು ಜೀವನದಲ್ಲಿ ಸಾಧಿಸಿ ತೋರಿಸಿದ ಅನುಭಾವಿಗಳು. ಪವಾಡಪುರುಷರೆನಿಸಿದರೂ ಪವಾಡಗಳಿಗೆ ಸೀಮಿತವಾಗಿರದೆ ಅದನ್ನು ಗೆದ್ದು ಆಧ್ಯಾತ್ಮಿಕ ವ್ಯಕ್ತಿತ್ವದಿಂದ ಜನತೆಯನ್ನು ಜಾಗೃತಗೊಳಿಸಿದ ದಿವ್ಯದೃಷ್ಟಿಯುಳ್ಳವರು. ಆ ಮಠಾಧಿಪತಿಗಳ ಆಚಾರ-ವಿಚಾರ, ಜೀವನದೃಷ್ಟಿ, ಲಿಂಗಪೂಜಾನಿಷ್ಠೆ, ನೈಷ್ಠಿಕ ಬ್ರಹ್ಮಚರ್ಯಪಾಲನೆ, ಸಮಾಜಸೇವೆ, ಕಾಯಕಶ್ರದ್ಧೆ, ಲೋಕ ಸಂಗ್ರಹ ಚಳಿಗಳಿಂದಾಗಿ ವೀರಶೈವಮಠಗಳು ಆದರ್ಶಪ್ರಾಯವೆನಿಸಿದುವು, ಸರ್ವ ಜನಾದರಣೀಯವಾದವು. ಅದಕ್ಕೂ ಹೆಚ್ಚಿನದಾಗಿ ಮಠಾಧಿಪತಿಗಳಿಗೆ ಅಭೂತಪೂರ್ವವಾದ ಮನ್ನಣೆಯನ್ನು ತಂದುಕೊಟ್ಟವು. ಒಂದು ಮಾತಿನಲ್ಲಿ ಹೇಳಬಹುದಾದರೆ ಬಸವಾದಿ ಶರಣರು ಬೋಧಿಸಿದ ತತ್ವಗಳಿಗೆ ಪ್ರಯೋಗಶಾಲೆಗಳಾಗಿ ಬಂದವು ಈ ಮಠಗಳು.

ಸಮಾಜದ ದೌರ್ಭಾಗ್ಯವೆಂದರೆ ಉನ್ನತ ಪರಂಪರೆಯನ್ನು ಬೆಳೆಸಿಕೊಂಡು ಬಂದ ಮಠಮಾನ್ಯಗಳಿಗೆ ಕಾಲಾನುಕ್ರಮದಲ್ಲಿ ಬರುತ್ತಿರುವ ಮಠಾಧಿಪತಿಗಳ ವೈಯಕ್ತಿಕ ಚಾರಿತ್ರ್ಯಶುದ್ಧಿಯ ಅಭಾವದಿಂದಾಗಿ, ಜೀವನಕ್ರಮದಿಂದಾಗಿ ತಮಗಿದ್ದ ಗೌರವಾದರಗಳನ್ನು ದಿನೇದಿನೇ ಕಳೆದುಕೊಳ್ಳುತ್ತಿರುವುದು ಬ್ರಹ್ಮಚರ್ಯ ಪಾಲನೆಯಲ್ಲಿ ಶಿಥಿಲವಾಗುತ್ತಿರುವುದಂತೂ ತುಂಬಾ ಶೋಚನೀಯ. ಬ್ರಹ್ಮಚರ್ಯ ಪಾಲನೆಗೆ ಅತಿ ಮುಖ್ಯವಾಗಿ ಆಹಾರದಲ್ಲಿ ನಿಯಮ ನಿಷ್ಠೆಗಳು ಅಗತ್ಯ, ಮತ್ತು ಮನೋನಿಗ್ರಹ ಅಷ್ಟೇ ಮುಖ್ಯ. ಏಕೆಂದರೆ-ವಿಶ್ವಾಮಿತ್ರ ಪರಾಶರ ಪ್ರಭೃತಯೋ ವಾತಾಂಬುಪರ್ಣಾಶನಾಃ । ತೇಽಪಿ ಸ್ತ್ರೀಮುಖ ಪಂಕಜಂ ಸುಲಲಿತಂ ದೃಷ್ಟ್ವೈವ ಮೋಹಂ ಗತಾಃ । ಶಾಲ್ಯನ್ನಂ ಸಘೃತಂ ಪಯೋದಧಿಯುತಂ ಯೇ ಭುಂಜತೇ ಮಾನವಾಃ । ತೇಷಾಮಿಂದ್ರಿಯ ನಿಗ್ರಹೋ ಯದಿ ಭವೇತ್ ವಿಂಧ್ಯಃ ಪ್ಲವೇತ್ಸಾಗರೇ ॥ ವಿಶ್ವಾಮಿತ್ರ ಪರಾಶರ ಮೊದಲಾದ ಋಷಿಗಳು ಗಾಳಿ, ನೀರು, ಮತ್ತು ಎಲೆಗಳನ್ನು ಸೇವಿಸುತ್ತಿದ್ದರೂ ಕೂಡ ಸ್ತ್ರೀಯರ ಸುಂದರ ಮುಖದರ್ಶನ ಮಾತ್ರದಿಂದಲೇ ಮೋಹಿತರಾದರು. ಹೀಗಿರುವಾಗ ಹಾಲುತುಪ್ಪ ಮೊಸರಿನಿಂದ ಕೂಡಿದ ಮೃಷ್ಟಾನ್ನ ಭೋಜನ ಮಾಡುವ ಮಾನವರು ತಮ್ಮ ಇಂದ್ರಿಯ ನಿಗ್ರಹವನ್ನು ಮಾಡುತ್ತಾರೆಂಬುದು ಸಮುದ್ರದಲ್ಲಿ ವಿಂಧ್ಯಪರ್ವತ ತೇಲಿದಂತೆ. ಆದುದರಿಂದ ಪ್ರಸಾದದಲ್ಲಿ ತುಂಬ ಎಚ್ಚರ, ಸಂಯಮಗಳು ಮಠಾಧಿಪತಿಗಳಿಗೆ ಅಗತ್ಯ. ಆದರೆ ಇಂದು ಪ್ರಾಪಂಚಿಕರಿಗಿಂತಲೂ ಮಠಾಧಿಪತಿಗಳು ಈ ಪ್ರಸಾದನಿಷ್ಠೆಯಲ್ಲಿ



ಜಾರುತ್ತಿರುವುದು ದುರ್ದೈವ. “ವೇಧಾದ್ವೇಧಾ ಭ್ರಮಂಚಕ್ರೇ ಕಾಂತಾಸು ಕನಕೇಷುಚ, ತಾಸುತೇಷ್ವಪ್ಯನಾಸಕ್ತಃ ಸಾಕ್ಷಾತ್ ಭರ್ಗೋನರಾಕೃತಿಃ ॥ ಬ್ರಹ್ಮನು ಹೆಣ್ಣು ಮತ್ತು ಹೊನ್ನುಗಳಲ್ಲಿ ಮೋಹವನ್ನುಂಟುಮಾಡಿದನು. ಇವುಗಳಲ್ಲಿ ಯಾರು ನಿರಾಸಕ್ತರೋ ಅವರು ಮನುಷ್ಯರೂಪದ ಪ್ರತ್ಯಕ್ಷ ಪರಮಾತ್ಮನೇ ಸರಿ-ಎಂಬುದನ್ನು ಮನನ ಮಾಡುತ್ತಿಲ್ಲ. ಆಚರಣೆಯಲ್ಲಿಟ್ಟುಕೊಳ್ಳುತ್ತಿಲ್ಲ ಇದಕ್ಕೆ ಬದಲಾಗಿ ಇಂದು ನಡೆದಿರುವುದೇ ಕಂಡುಬರುತ್ತಿದೆ. “ಶರಣನಾರಿಗಂಜ” ಎಂಬ ದಿಟ್ಟನಿಲವನ್ನು ಪ್ರತಿಪಾದಿಸಬೇಕಾದ ಮಠಾಧಿಪತಿಗಳೇ ರಾಜಕಾರಣಿಗಳ, ಭ್ರಷ್ಟಮುಖಂಡರ, ಸ್ವಾರ್ಥಿಗಳ, ಗಣ್ಯರೆನಿಸಿದವರ ಮರ್ಜಿದರ್ಜಿಗಳಿಗೆ ಕಿವಿಗೊಡುವಂತಾಗಿರುವುದು ದುಃಖಕರ. ಕರ್ನಾಟಕದಲ್ಲಿರುವ ಸಹಸ್ರಾರು ವೀರಶೈವ ಮಠಗಳಲ್ಲಿ ಕೆಲವೇ ಮಠಗಳು ಪವಿತ್ರವಾದ ಪರಂಪರೆಯನ್ನು ಉಳಿಸಿಕೊಂಡು ಸ್ವಾಮಿತ್ವದ ಆದರ್ಶತೆಯನ್ನು ಕಾಪಾಡಿಕೊಂಡಿರುವುದು ಅಭಿಮಾನಾಸ್ಪದವಾದ ಸಂಗತಿ. ಈ ಉಜ್ವಲವಾದ ಪರಂಪರೆಗೆ ವಿಚ್ಛಿತ್ತಿ ಬರದಂತೆ ಕಾಪಾಡಿಕೊಳ್ಳುವುದು ಈ ಮಠಗಳ ಗದ್ದುಗೆಗಳನ್ನೇರುವ ಸ್ವಾಮಿಗಳ ಮುಖ್ಯವಾದ ಕರ್ತವ್ಯ. ಈ ಬಗ್ಗೆ ಸಾಕಷ್ಟು ಗಮನ ಕೊಡುವುದು ಸಮಾಜಬಾಂಧವರ ಕರ್ತವ್ಯ. ಯಾರೇ ಆಗಲಿ ಇಂತಹ ಮಠಗಳಿಗೆ ನೇಮಿಸಿರತಕ್ಕ ಸ್ವಾಮಿಗಳು ಬ್ರಹ್ಮಚರ್ಯ ಕಾಪಾಡಿಕೊಂಡು ಪರಂಪರೆಯನ್ನು ರಕ್ಷಣೆಮಾಡುವ ಶಕ್ತಿಯಿಲ್ಲದಿದ್ದರೆ ತಾವೇ ಸ್ಥಾನವನ್ನು ಬಿಟ್ಟುಕೊಟ್ಟು ಮಠದ ಧವಳ ಕೀರ್ತಿಯನ್ನು ಬೆಳೆಸುವ ಔದಾರ್ಯವನ್ನು ವ್ಯಕ್ತಪಡಿಸಿ ಸಮಾಜ ಬಾಂಧವರ ಗೌರವವನ್ನು ಗಳಿಸಿಕೊಳ್ಳುವುದು ಸೂಕ್ತ. ಸಮಾಜ ಬಾಂಧವರು ಯಾವುದೇ ವಿಧವಾದ ವೈಯಕ್ತಿಕ ಅಭಿಮಾನ, ಸ್ವಾರ್ಥಪರತೆ, ಸಂಕುಚಿತ ಭಾವನೆಗಳಿಗೆ ಎಡೆಗೊಡದೆ ಪ್ರಾಂಜಲ ಮನಸ್ಸಿನಿಂದ, ತಾತ್ವಿಕ ದೃಷ್ಟಿಯಿಂದ ಪರಿಶೀಲಿಸಿ ಮಠಗಳ ಘನತೆ, ಗೌರವ ಪಾವಿತ್ರ್ಯಗನ್ನೆತ್ತಿ ಹಿಡಿಯಲು ಅನುಕೂಲಕರ ವಾತಾವರಣವನ್ನು ಸೃಷ್ಟಿಸಿದರೆ ಮಹದುಪಕಾರವಾಗುತ್ತದೆ.

ವೀರಶೈವಧರ್ಮ ಸ್ವತಂತ್ರ ವಿಚಾರ ಶೀಲತೆಗೆ ಮಹತ್ವಕೊಟ್ಟದ್ದು, ಅಂಧಶ್ರದ್ಧೆಗೆ ಅದು ಪುರಸ್ಕಾರ ನೀಡಲಿಲ್ಲ. ವೇಶಕ್ಕೆ ಮೋಸಹೋದುದಲ್ಲ. ಬಾಹ್ಯ ಲಾಂಛನಗಳಿಗೆ ಬಾಗಿದುದಲ್ಲ. ಅಂತರಂಗದ ಶುದ್ಧಿಗೆ ಬೆಲೆಕೊಟ್ಟದ್ದು. “ಸತ್ಯವನೂ ಅಸತ್ಯವನು ಪ್ರತ್ಯಕ್ಷ ಪ್ರಮಾಣಿಸಿಯಲ್ಲದೆ ನಿಶ್ಚಯವನರಿಯಬಾರದು. ಗುರುವಾದಡೂ ಲಿಂಗವಾದಡೂ ಜಂಗಮವಾದಡೂ ಪರೀಕ್ಷಿಸಿ ಹಿಡಿಯದಿಹನ ಭಕ್ತಿ ವಿರಕ್ತಿ ತೂತು ಕುಂಬದಲ್ಲಿಯ ನೀರು, ಸೂತ್ರ ತಪ್ಪಿದ ಬೊಂಬೆ, ನಿಜನೇತ್ರ ತಪ್ಪಿದ ದೃಷ್ಟಿ.” ಗುರುಲಿಂಗ ಜಂಗಮದಲ್ಲಿಯೂ ಗುಣಲಕ್ಷಣ ವಿರಕ್ತಿಗಳನ್ನು ನೋಡಲೇ ಬೇಕೆಂಬ ದೃಷ್ಟಿ ಇಂದು ಅನಿವಾರ್ಯಸತ್ಯವಾಗಬೇಕು. ಆ ಯೋಗ್ಯತೆಯನ್ನು ಪಡೆದವರುಮಾತ್ರ ಸಮಾಜದ ಗೌರವಕ್ಕೆ ಪಾತ್ರರಾಗುತ್ತಾರೆ. ಪರುಷ ಪರಿಶುದ್ಧವಾಗಿದ್ದರೆ ಮಾತ್ರಅದು ಮುಟ್ಟಿದುದನ್ನು ಚಿನ್ನವನ್ನಾಗಿ ಮಾಡಬಲ್ಲುದಲ್ಲವೆ ?

—ಧರ್ಮಾಭಿಮಾನಿ

ಆಪ್ಯಾಯನಕ್ಕೆ ನೀಡುವೆ ಲಾಂಛನಕ್ಕೆ ಶರಣೆಂಬೆ
ಲಾಂಛನಕ್ಕೆ ತಕ್ಕ ಆಚರಣೆಯಿಲ್ಲದಿದ್ದರೆ
ಕೂಡಲ ಸಂಗಮದೇವ ನೀ ಸಾಕ್ಷಿಯಾಗಿ ಛೀಯೆಂಬೆ.

❧ ❧ ❧

ಗುರುಕಾರುಣ್ಯವೆ ಸದಾಚಾರ, ಗುರುಕಾರುಣ್ಯವೆ
ಶಿವಾಚಾರ, ಗುರುಕಾರುಣ್ಯವೆ ಪ್ರಸಾದ ರುಚಿ।
ಮುಂದೆ ಗುರು, ಹಿಂದೆ ಲಿಂಗ ಕೂಡಲ ಸಂಗಮದೇವಾ.

❧ ❧ ❧

ಅಧರ ತಾಗುವ ರುಚಿಯು, ಉದರ ತಾಗುವ
ಸುಖವ! ಲಿಂಗಾರ್ಪಿತವಿಲ್ಲದೆ ಕೊಂಡರೆ ಕಿಲ್ಬಿಷ ನೋಡಾ!
ನೇತ್ರ, ಶ್ರೋತ್ರ, ಜಿಹ್ವೆ, ಘ್ರಾಣ, ತ್ವಕ್ಕು
ಮೊದಲಾದ ಸರ್ವೇಂದ್ರಿಯಂಗಳಲ್ಲಿ ಮುಟ್ಟುವ ಸಕಲ
ಪದಾರ್ಥಗಳೆಲ್ಲವನ್ನು ಲಿಂಗಕ್ಕೆ ಕೊಟ್ಟು ಕೊಂಡರೆ,
ಅದು ಮಹಾಪ್ರಸಾದವಯ್ಯಾ, ಕೂಡಲ ಸಂಗಮದೇವಾ

❧ ❧ ❧

ಅಯ್ಯಾ, ಸಜ್ಜನ ಸದ್ಭಾವರ ಸಂಗದಿಂದ
ಮಹಾನುಭಾವರ ಕಾಣಬಹುದಯ್ಯಾ,
ಮಹಾನುಭಾವರ ಸಂಗದಿಂದ ಶ್ರೀ ಗುರುವನರಿಯಬಹುದು,
ಲಿಂಗವನರಿಯಬಹುದು, ಜಂಗಮವನರಿಯಬಹುದು,
ಪ್ರಸಾದವನರಿಯಬಹುದು, ತನ್ನ ತಾನರಿಯಬಹುದು.
ಅದು ಕಾರಣ ಸದ್ಭಕ್ತರ ಸಂಗವನೆ ಕರುಣಿಸು
ಕೂಡಲ ಸಂಗಮದೇವಾ ನಿಮ್ಮ ಧರ್ಮ ॥

# ಸಿದ್ಧಗಂಗಾ

ಸಂಪುಟ–೨೩ ಸಂಚಿಕೆ–೪ ಏಪ್ರಿಲ್, ೧೯೮೭

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಸಾಣೆಯಾಗಲಿ ದೇಹ ಗಂಧವಾಗಲಿ ಆತ್ಮ
ಆತ್ಮ ದೇಹಗಳೆರಡು ಬೆರೆದಿರಲಿ। ಎಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

* * *

ಹರಿವ ನದಿಯಾಗಿರಲಿ ಬಿರಿವ ಮೊಗ್ಗಾಗಿರಲಿ
ಸ್ಥಿರವಿರಲಿ ಶಿವಭಾವ ಬಾಳಿನಲಿ ಎಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

* * *

ಪರನಿಂದೆ ಪರಹಿಂಸೆ ಬರದಿರಲಿ ಬಾಳಿನಲಿ
ಗುರು ಬಂದು ಅರಳುವ ಮನದೊಳಗೆ। ಎಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

—ಹೆಚ್.ವಿ. ವೀರಭದ್ರಯ್ಯ.

# ಸಿದ್ಧಗಂಗಾಂತರಂಗ





## ಶ್ರೀವಾಣಿ

### ಬ್ರಹ್ಮಚರ್ಯ

ಧರ್ಮ, ಸಂಸ್ಕೃತಿ, ಆಧ್ಯಾತ್ಮಿಕತೆಯ ಪವಿತ್ರ ತತ್ವಗಳ ಮೇಲೆ ಬೆಳೆದು ತನ್ನ ವೈಶಿಷ್ಟ್ಯವನ್ನು ಉಳಿಸಿಕೊಂಡು ಬಾಳನ್ನು ಬೆಳಗಿಸಿಕೊಂಡು ಬಂದಿರುವ ನಮ್ಮೀ ಭರತಖಂಡದಲ್ಲಿ ಪ್ರಾಚೀನ ಕಾಲದಿಂದಲೂ ಬ್ರಹ್ಮಚರ್ಯ ರಕ್ಷಣೆಗೆ ವಿಶೇಷ ಮಹತ್ವವನ್ನು ಕೊಟ್ಟಿದ್ದರು. ಜಗತ್ತಿನ ಪ್ರಾಚೀನತಮ ಗ್ರಂಥಗಳೆಂದ ವೇದಗಳೂ ಸಹ ಇದರ ಶ್ರೇಷ್ಠತೆ ಹೊಗಳಿ ಬ್ರಹ್ಮಚರ್ಯದಿಂದಲೇ ಮನುಷ್ಯನ ಸರ್ವಶಕ್ತಿಗಳು ಶುದ್ಧವಾಗಿ ಸಾರ್ಥಕತೆಯನ್ನು ಪಡೆಯುವುದೆಂದು ಸಾರಿವೆ. ವೇದಗಳಲ್ಲಿನ ಬ್ರಹ್ಮಚರ್ಯ ರೂಪಿ ತೇಜಸ್ಸಿನಿಂದಲೇ ರಾಜನು ಪ್ರಜೆಗಳನ್ನು ಸಂರಕ್ಷಣೆ ಮಾಡುತ್ತಾನೆ. ಆಚಾರ್ಯನು ಬ್ರಹ್ಮಚಾರಿಯಾಗಿರತಕ್ಕ ಶಿಷ್ಯನನ್ನು ಇಚ್ಛಿಸುತ್ತಾನೆ. ಬ್ರಹ್ಮಚರ್ಯದಿಂದಲೇ ದೇವತೆಗಳು ಮೃತ್ಯುವನ್ನು ಜಯಿಸಿದರು. ಬ್ರಹ್ಮಚರ್ಯದಿಂದಲೇ ಇಂದ್ರನು ದೇವತೆಗಳಿಗೆ ಸ್ವರ್ಗ ಸಂಪತ್ತನ್ನು ತಂದುಕೊಟ್ಟನು.

ನತಪಸ್ತಪ . ಇತ್ಯಾಹು-ಬ್ರಹ್ಮಚರ್ಯಂ ತಪೋತ್ತಮಮ್ ।
ಊರ್ಧ್ವರೇತಾ ಭವೇದ್ಯಸ್ತು ಸದೇವೋನತು, ಮಾನುಷಂ ॥

ಬ್ರಹ್ಮಚರ್ಯವೇ ಶ್ರೇಷ್ಠವಾದ ತಪಸ್ಸು. ಬ್ರಹ್ಮಚರ್ಯ ರಕ್ಷಣೆ ಮಾಡಿಕೊಂಡಿರುವವನು ಮನುಷ್ಯರಲ್ಲಿ ದೇವನು. ಬ್ರಹ್ಮಚರ್ಯ ರಕ್ಷಣೆ ಮಾಡದಿರುವುದರಿಂದ ಆಯುಷ್ಯ, ತೇಜಸ್ಸು, ಯಶಸ್ಸು, ಶಕ್ತಿ ಶೌರ್ಯ, ಬುದ್ಧಿ ಸಂಪತ್ತು, ಪುಣ್ಯ, ಎಲ್ಲವೂ ನಾಶವಾಗುತ್ತವೆ. ನಿರಂತರ ಬ್ರಹ್ಮಚರ್ಯ ಪರಿಪಾಲನೆ ಮಾಡುವವನು ಶೀಲ ಸಂಪನ್ನನು ದೀರ್ಘಾಯುವು, ಶಕ್ತಿಯುತನು ಆಗುತ್ತಾನೆ. ಬ್ರಹ್ಮಚರ್ಯವೇ ಜೀವನ. ವೀರ್ಯ ನಾಶವೇ ಮೃತ್ಯು ಎಂದೂ ಸಾರಿರುವ ಆರ್ಯೋಕ್ತಿಗಳು ಪವಿತ್ರ ಮಂತ್ರಗಳು ಈ ಬ್ರಹ್ಮಚರ್ಯದ ಮಹತ್ವ ಅರಿತು ಸಾಧನೆ ಮಾಡುವ ಸಾಧಕರ ಸಂಖ್ಯೆ ಬೆಳೆದಂತೆಲ್ಲಾ ಜನಾಂಗವು ಸುಸಂಸ್ಕೃತವಾಗಿ ಉನ್ನತಿಯನ್ನು ಹೊಂದುತ್ತದೆ. ಎಂದು ಸಾರಿ ಬ್ರಹ್ಮಚರ್ಯದ ಮಹಿಮೆಯನ್ನು ಹೊಗಳಿವೆ.

"ಸಿದ್ಧಗಂಗಾ" ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಮಠ-572104

ತುಮಕೂರು ಜಿಲ್ಲೆ.

ಪ್ರಧಾನ ಸಂಪಾದಕರು

ಪಂ॥ ಚನ್ನಪ್ಪ ಎರೇಸೀಮೆ

ಸಂಪಾದಕರು

ಹೆಚ್. ವಿ. ವೀರಭದ್ರಯ್ಯ

* * *

ಸಹ ಸಂಪಾದಕರು

ಬಿ. ವೀರಭದ್ರಯ್ಯ

ಸಿ. ಎನ್. ಚಂದ್ರಶೇಖರಯ್ಯ

* * *

ಜಾಹೀರಾತು ವಿಭಾಗ

ಎಂ. ರೇಣುಕಾರಾಧ್ಯ

* * *

ಪ್ರಸಾರ ವಿಭಾಗ

ಆರ್. ಎಸ್. ಮಲ್ಲೇಶಪ್ಪ

* * *

ಪ್ರಕಾಶಕರು

ಹೆಚ್. ಬಿ. ಗಂಗಾಧರಯ್ಯ

ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *

ಮುದ್ರಕರು

ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ

* * *

ಪ್ರಕಟಣೆಯ ಸ್ಥಳ

ಶ್ರೀ ಸಿದ್ಧಗಂಗಾ ಕ್ಷೇತ್ರ

ಚಂದಾ ವಿವರ

ವಾರ್ಷಿಕ ಚಂದಾ 20-00 ರೂ

ಆಜೀವ ಸದಸ್ಯತ್ವ 201-00 ರೂ


### ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜನೀತಿ, ಧರ್ಮ, ದರ್ಶನ, ಇತಿಹಾಸ ವೈಚಾರಿಕ, ಚಿಂತನ, ನಗೆಬರೆಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್‌ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗುಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಚೀಟಿಯನ್ನು ಲಗತ್ತಿಸಿರಬೇಕು. ಲೇಖನಗಳು ಅಕಸ್ಮಾತ್ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶವಿಲ್ಲ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿ ಪಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರಹಗಾರರಿಗೆ ಆದ್ಯತೆ ಕೊಡಲಾಗುವುದು.


"ಸಂಪಾದಕರು"

'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಕ್ಷೇತ್ರ-572104

ತುಮಕೂರು ಜಿಲ್ಲೆ.

ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.






## ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್

ಯುಗಕ್ಕೊಮ್ಮೆ ಪುಣ್ಯ ಪುರುಷರ ಅವತಾರ ಎಂಬ ಹೇಳಿಕೆಯುಂಟು. ಅಂತೆಯೇ ಪುಣ್ಯ ಸಂಸ್ಥೆಗಳ ಉದಯವಾದರೂ ಕೂಡ. ಜಗತ್ತನ್ನೇ ನಿಬ್ಬೆರಗುಗೊಳಿಸುವಂಥ ಸಂಸ್ಕೃತಿ ಶರಣ ಸಂಸ್ಕೃತಿ. ಜೀವನದ ಸಮಗ್ರ ಮುಖಗಳನ್ನು ತುಂಬಿ ಕೊಟ್ಟಂಥ ದಿವ್ಯ ವಿಧಾನ. ದೇಹ-ಆತ್ಮಗಳ, ವ್ಯಕ್ತಿ-ಸಮಾಜಗಳ, ಬದುಕು-ಭಾವನೆಗಳ, ನಡೆ-ನುಡಿಗಳ ಸಾಮರಸ್ಯವನ್ನು ಸಾಧಿಸಿ ತೋರಿಸಿದ ವೈಶಿಷ್ಟ್ಯಪೂರ್ಣ ಸಂಸ್ಕೃತಿ. ಬಸವಾದಿ ಶರಣರ ಜೀವನ ವಿಧಾನದಿಂದ ಅದಕ್ಕೊಂದು ಚಿರಂತನ ಮೌಲ್ಯ ಪ್ರಾಪ್ತವಾಯಿತು. ಧರ್ಮ, ಅರ್ಥ, ಕಾಮ, ಮೋಕ್ಷಗಳಿಗೆಲ್ಲ ತನ್ನದೇ ಆದ ವಿನೂತನ ವೈಚಾರಿಕ ಬೆಳಕನ್ನು ತುಂಬಿ ಜಾಗತಿಕ ಸಂಸ್ಕೃತಿಯಾಗುವಷ್ಟು ಜೀವತುಂಬಿತು. ಜಗತ್ತಿನ ಇತಿಹಾಸದಲ್ಲಿಯೇ ಇಂಥ ಮತ್ತೊಂದು ಸಂಸ್ಕೃತಿ ಮೂಡಿಬಂದಿಲ್ಲವೆಂಬಂತೆ ಪ್ರಶಂಸೆಗೊಳಗಾಯಿತು. ಆ ಸಂಸ್ಕೃತಿಯ ಒಂದು ಮುಖವಾಗಿ ಅರಳಿತು ಶರಣ ಸಾಹಿತ್ಯ.

ಶರಣ ಸಾಹಿತ್ಯ ಅಂದಾಕ್ಷಣ ವಚನ ಸಾಹಿತ್ಯ ಕಣ್ಣೆದುರು ಮೂಡಿನಿಲ್ಲುವುದು ಸಹಜ. ಆದರೆ ಶರಣ ಸಾಹಿತ್ಯ ಅಷ್ಟಕ್ಕೇ ಸೀಮಿತವಾದುದಲ್ಲ, ಸಾಹಿತ್ಯದ ಎಲ್ಲ ಪ್ರಕಾರಗಳಿಗೂ ಅದು ಇಂಬುಕೊಟ್ಟಿರುವಂಥದ್ದು. ಪ್ರಾಚೀನ ಅರ್ವಾಚೀನ ಎಂಬೆಲ್ಲ, ಗದ್ಯ-ಪದ್ಯ ಎಂಬೆಲ್ಲ, ಶ್ರವ್ಯ-ದೃಶ್ಯ ಎಂಬೆಲ್ಲ, ಶಾಸ್ತ್ರ-ಸಾಹಿತ್ಯ ಎನ್ನುವುದೆಲ್ಲವನ್ನೂ ಒಳಗೊಂಡಿದೆ. ಪ್ರೌಢ ಕಾವ್ಯಗಳಿರುವಂತೆಯೇ, ಪಾಮರ ರಚಿತ ಮಂದಾರ ಜನಪದ ಸಾಹಿತ್ಯವೂ ಅದರಲ್ಲಿ ಅಡಕವಾಗಿದೆ. ಸೈದ್ಧಾಂತಿಕವಾಗಿ ಶಕ್ತಿವಿಶಿಷ್ಟಾದ್ವೈತ ಅಥವಾ ಶಿವಾದ್ವೈತ ಸಾಹಿತ್ಯ ಎಂದು ಕರೆಸಿಕೊಳ್ಳುವ, ಧಾರ್ಮಿಕವಾಗಿ ವೀರಶೈವ ಅಥವಾ ಲಿಂಗಾಯಿತ ಸಾಹಿತ್ಯವೆನಿಸಿಕೊಳ್ಳುವ, ಆಧ್ಯಾತ್ಮಿಕವಾಗಿ ಕೈವಲ್ಯ ಸಾಹಿತ್ಯ ಅಥವಾ ಲಿಂಗ ಸಾಹಿತ್ಯವೆನಿಸಿಕೊಳ್ಳುವ ಎಲ್ಲವೂ ಶರಣ ಸಾಹಿತ್ಯವೇ ಎನಿಸಿಕೊಳ್ಳುತ್ತದೆ.

ಶರಣ ಸಾಹಿತ್ಯಕ್ಕೊಂದು ಪರಿಷತ್ ಉದಯವಾದದ್ದು ಸಮಾಜದ ತನ್ಮೂಲಕ ಕನ್ನಡ ನುಡಿಯ ಹಾಗೂ ನಾಡಿನ ಭಾಗ್ಯ. ಪುಣ್ಯ ಕಾರ್ಯಗಳ ಹಿಂದೆ ಅನಂತ ಸತ್‌ಶಕ್ತಿಗಳ ತೀವ್ರ ತುಡಿತ, ಹಂಬಲ, ತಪಸ್ಸು ಕೆಲಸಮಾಡುತ್ತಿರುತ್ತದೆ. ಇದೀಗ ಉದಯವಾಗಿರುವ "ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್" ನ ಹಿಂದೆ

ಶಿವಯೋಗಿಗಳ, ಶರಣ ಧರ್ಮನಿಷ್ಠರ, ಅಭಿಮಾನಿಗಳ ಕ್ರಿಯಾಶಕ್ತಿಯಿದೆ. ಸುತ್ತೂರು ಪರಮ ಪೂಜ್ಯ ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ರಾಜೇಂದ್ರ ಮಹಾಸ್ವಾಮಿಗಳವರ ದಿವ್ಯ ಸಂಕಲ್ಪ, ಡಾ|| ಹೆಚ್ ತಿಪ್ಪೇರುದ್ರ ಸ್ವಾಮಿಗಳವರ ಮಹಾಪ್ರಯತ್ನ, ಸಹಸ್ರಾರು ಶರಣ ಬಂಧುಗಳ ಸಹಕಾರದೊಂದಿಗೆ ಮೇಲ್ಕಂಡ ಪರಿಷತ್ತಿನ ಉದಯವಾದದ್ದು ಶುಭೋದಯ ಪೂರ್ಣ. ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರಾದ ಪರಮ ಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ದಿವ್ಯಾಶೀರ್ವಾದ ಒದಗಿ ಬಂದದ್ದಂತೂ ಅಪೂರ್ವ ಯೋಗಾಯೋಗ. ಶರಣ ಸಾಹಿತ್ಯ ಸಂವರ್ಧನೆಗಾಗಿ, ಸಂರಕ್ಷಣೆಗಾಗಿ, ಸಾರ್ಥಕ ಪ್ರಚಾರಕ್ಕಾಗಿ, ಸದಾಶಯ ಸದುದ್ದೇಶಗಳಿಗಾಗಿ ಪರಿಷತ್ತು ಹೆಜ್ಜೆಯಿಡುವ ಮಹಾ ಪಥದಲ್ಲಿ ನಡೆದಿದೆ. ನಾಡಿನ ತುಂಬಾ ಅನೇಕ ಪರಿಷತ್ತುಗಳಿದ್ದೂ ಇಂಥ ಇನ್ನೊಂದು ಪರಿಷತ್ತಿನ ಅಗತ್ಯವಿತ್ತೇ ಎಂಬ ಪ್ರಶ್ನೆ ಏಳಬಹುದಾದರೂ ಒಂದು ಮಹಾಸಂಸ್ಕೃತಿಯ ಸಂಪೂರ್ಣ ಪರಿಚಯ, ಅನುಷ್ಠಾನ ಅನುಸರಣೆಯ ಪ್ರಯತ್ನ ಮಾಡುವುದು. ಹೀಗೆ ಪರಿಷತ್ತುಗಳ ಮೂಲಕ ಅಪ್ರಕೃತ ಅಥವಾ ಅಪ್ರಸ್ತುತವೇನೂ ಆಗಲಾರದು.

ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಆಶ್ರಯದಲ್ಲಿ 1987 ರ ಮೇ 30, 31 ರಂದು ಮೈಸೂರು ನಗರದ ಕಲಾಭವನದಲ್ಲಿ ಶರಣ ಸಾಹಿತ್ಯ ಪ್ರಥಮ ಸಮ್ಮೇಳನ ನಡೆಯಿತು. ಬೆಳೆವ ಪೈರು ಮೊಳಕೆಯಲ್ಲಿ ಕಾಣುತ್ತದೆ ಎಂಬಂತೆ ಅತ್ಯಂತ ಸುಂದರವಾಗಿ, ವ್ಯವಸ್ಥಿತವಾಗಿ ಸಮ್ಮೇಳನ ನಡೆದದ್ದು ಎಲ್ಲರಿಗೂ ಸಂತೋಷವನ್ನುಂಟುಮಾಡಿತು. ಪರಮ ಪೂಜ್ಯ ಜಗದ್ಗುರು ಸುತ್ತೂರು ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳ ದಿವ್ಯ ನೇತೃತ್ವದಲ್ಲಿ, ಶರಣ ಸಾಹಿತ್ಯ ಪರಿಷತ್ತಿನ ಪ್ರಥಮಾಧ್ಯಕ್ಷರಾದ ಡಾ|| ಹೆಚ್ ತಿಪ್ಪೇರುದ್ರ ಸ್ವಾಮಿಗಳವರ ಮಾರ್ಗದರ್ಶನದಲ್ಲಿ, ಸಮ್ಮೇಳನಾಧ್ಯಕ್ಷರಾದ ಅನುಭಾವಿ ಶರಣ ಶ್ರೀ ಸಂ. ಶಿ. ಭೂಸನೂರು ಮಠದ ಸಮ್ಮುಖದಲ್ಲಿ, ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರಾದ ಪರಮ ಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರು ಸಮ್ಮೇಳನವನ್ನು ಜ್ಯೋತಿ ಬೆಳಗಿಸುವುದರ ಮೂಲಕ ಉದ್ಘಾಟಿಸಿದ ದೃಶ್ಯ ರಮಣೀಯವಾಗಿತ್ತು. ಸ್ವಾಗತ ಭಾಷಣ ಮಾಡುತ್ತ ಡಾ|| ಹೆಚ್. ತಿಪ್ಪೇರುದ್ರ ಸ್ವಾಮಿಯವರು ಬಸವ ತತ್ವಗಳ ಜೀವಂತ ಪ್ರಯೋಗ ಶಾಲೆ ಶ್ರೀ ಸಿದ್ಧಗಂಗಾ ಮಠ" ಎಂದು ತುಂಬು ಹೃದಯದ ಮಾತನಾಡಿದ್ದಂತೂ ಸಭೆಯ ಕರತಾಡನಕ್ಕೆ ಕಾರಣವಾಯಿತು. ಸಮ್ಮೇಳನಾಧ್ಯಕ್ಷರಾಗಿ ಅನುಭಾವಿ ಶರಣ ಶ್ರೀ ಸ. ಸ. ಮಾಳವಾಡರು ಅನಾರೋಗ್ಯದ ನಿಮಿತ್ತ ಬಾರದೇ ಹೋದರೂ ಅವರು ಮಾಡಬೇಕಿದ್ದ ಭಾಷಣ ಅಚ್ಚಾಗಿ ಸಹೃದಯರಿಗೆ ದೊರಕಿದ್ದು ಮತ್ತೊಂದು ವೈಶಿಷ್ಟ್ಯವಾಯಿತು. ಶ್ರೀ. ಸ. ಶಿ. ಭೂಸನೂರು ಮಠದ ಅಧ್ಯಕ್ಷತೆಯಲ್ಲಿ ಸಮ್ಮೇಳನ ಯಶಸ್ವಿಯಾಗಿ ನಡೆಯಿತು.

49 ನೇ ಪುಟ ನೋಡಿ



# ಗ್ರಾಮಾಂತರ ಬಸವ ಜಯಂತಿ

—ಹೆಚ್. ವಿ. ವೀರಭದ್ರಯ್ಯ

ಆತ್ಮೀಯ ಶರಣ ಬಂಧು,

ತೆಂಡಾಳು ಒಂದು ಪುಣ್ಯಗ್ರಾಮ. ಗೌರಿಬಿದನೂರು ತಾಲ್ಲೂಕಿನ ಮುಖ್ಯ ಗ್ರಾಮಗಳಲ್ಲಿ ಒಂದು. ದಿನಾಂಕ 15–4–86 ರಂದು ಅಲ್ಲಿ ಬಸವ ಜಯಂತಿಯ ಆಚರಣೆ. ಭಕ್ತಿ ಉತ್ಸಾಹಗಳೇ ಮೈ ತಾಳಿದಂತೆ ಗ್ರಾಮೀಣ ಬಂಧುಗಳ ಶ್ರದ್ಧೆ ನಿಷ್ಠೆಗಳು ಕಂಡವರು ಬೆಕ್ಕಸ ಬೆರಗಾದರು. ಪರಮ ಪೂಜ್ಯ ಶ್ರೀ ಶ್ರೀಗಳವರನ್ನು ಸಾಲಂಕೃತ ರಥದಲ್ಲಿ ಮುಹೂರ್ತ ಮಾಡಿಸಿ ಮಂಗಳ ವಾದ್ಯಗಳು, ನಂದೀಧ್ವಜ ವೀರಗಾಸೆ, ಛತ್ರಿ ಚಾಮರಗಳೊಂದಿಗೆ ಉತ್ಸವದ ಮೆರವಣಿಗೆ ಮಾಡಿದರು. ಬಸವ ಭಕ್ತಿಯ ಬೆಳಕಿನಲ್ಲಿ ಆ ಮುಗ್ಧ ಬಂಧುಗಳು ಶ್ರೀ ಶ್ರೀಗಳವರಲ್ಲಿ ಬಸವಣ್ಣನವರನ್ನೇ ಕಾಣುತ್ತಿದ್ದರು. ಪರಮ ಪೂಜ್ಯರಿಗೆ ಉತ್ಸವಗಳೆಂದರೆ ಆಗುವುದಿಲ್ಲ. ಆದರೂ "ಜಗವ ಸುತ್ತಿಪ್ಪುದು ನಿನ್ನ ಮಾಯೆಯಯ್ಯಾ, ನಿನ್ನ ಸುತ್ತಿಪ್ಪುದು ನನ್ನ ಭಕ್ತಿಯಯ್ಯಾ" ಎಂಬ ಅಣ್ಣನವರ ವಾಣಿಯಂತೆ ಭಕ್ತರ ಭಕ್ತಿಯ ಬಲೆಯಲ್ಲಿ ಶ್ರೀ ಶ್ರೀಗಳು ಮನಸ್ಸಿಲ್ಲದಿದ್ದರೂ ಉತ್ಸವಕ್ಕೆ ಒಪ್ಪಲೇಬೇಕಾಯಿತು. ಇಷ್ಟಾಗಿಯೂ ತಮ್ಮ ಕೈಯಲ್ಲಿ ಅಣ್ಣನವರ ವಚನಗಳ ಕಟ್ಟನ್ನು ಹಿಡಿದೇ ರಥವೇರಿದರು. ಅಥಣಿಯ ಸ್ವಾಮಿಗಳು ಉತ್ಸವಾದಿಗಳಲ್ಲಿ ಅಣ್ಣನ ವಚನಗಳನ್ನು ಪಲ್ಲಕ್ಕಿಯಲ್ಲಿಟ್ಟು ಗೌರವ ಭಕ್ತಿಗಳನ್ನು ವ್ಯಕ್ತಪಡಿಸುತ್ತಿದ್ದರಂತೆ. ಅಂತೆಯೇ ಪರಮ ಪೂಜ್ಯ ಶ್ರೀ ಶ್ರೀಗಳು ಅಣ್ಣನ ವಚನಗಳ ಉತ್ಸವವೇ ತಮ್ಮ ಮಣಿಹವೆಂದುಕೊಂಡು ತಾವು ರಥವೇರಿದರೂ ಮೊದಲು ವಚನಗಳು ಅನಂತರ ತಾವು ಎಂದೇ ನಡೆದಿದ್ದಾರೆ. ಮೆರವಣಿಗೆ ಸಭಾ ಮಂಟಪಕ್ಕೆ ಬರುವ ದಾರಿಯುದ್ದಕ್ಕೂ ಬಾಳೆ ಕಂಬಗಳ, ತಳಿರು-ತೋರಣಗಳ ಅಲಂಕಾರ ಕಣ್ಸೆಳೆಯುತ್ತಿತ್ತು. ಭಕ್ತಾದಿಗಳ ಜಯ ಘೋಷ ಮುಗಿಲಿಗೇರಿತ್ತು. ಅದೊಂದು ಹೃದಯಸ್ಪರ್ಶಿ ದೃಶ್ಯ.

ಹತ್ತೂವರೆ ಘಂಟೆಗೆ ಸಭೆ ಆರಂಭವಾಯಿತು. ಶ್ರೀ. ಎಂ. ಆರ್. ಬೈಲಪ್ಪನವರು ಮಾತನಾಡುತ್ತಾ ನಮ್ಮ ಜೀವನ ಪರಿಶುದ್ಧತೆಗಾಗಿ, ಭವ್ಯತೆಗಾಗಿ ಬಸವಣ್ಣನವರಂಥ ಮಹಾತ್ಮರನ್ನು ನೆನೆಯಬೇಕು ಎಂದು ಉಪನ್ಯಾಸ ಮಾಡಿದರು.

ಲೋಕಸಭಾ ಸದಸ್ಯರಾದ ಶ್ರೀ ಕೃಷ್ಣರಾವ್‌ರವರು ಭಾಷಣ ಮಾಡುತ್ತ ಬಸವಣ್ಣನವರು ವಿಶ್ವದ ಮಾನವರು, ಆ ಪರಂಪರೆಯ ಜೀವಂತ ಉದಾಹರಣೆ ಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು. ಎಲ್ಲ ದಾನಕ್ಕಿಂತ ಅನ್ನ ದಾನವೇ ಮುಖ್ಯ

ವೆಂಬುದನ್ನು ಸಾಕ್ಷಾತ್ಕಾರ ಮಾಡಿ ತೋರಿಸಿರುವ ಮಹಾನುಭಾವರು. ಇಡೀ ಭಾರತದಲ್ಲಿ ಇಂಥ ಮತ್ತೊಬ್ಬ ಮಹಾಸ್ವಾಮಿಗಳು ಕಾಣುವುದಿಲ್ಲ ಎಂದರಲ್ಲದೆ ಇಡೀ ಜನಸ್ತೋಮದ ಪರವಾಗಿ ಪೂಜ್ಯ ಶ್ರೀ ಶ್ರೀಗಳಿಗೆ ಭಕ್ತಿ ಪ್ರಣಾಮಗಳನ್ನ ಅರ್ಪಿಸಿದರು.

ಸಿದ್ಧಗಂಗೆಯ ಮಂತ್ರ ದುಡಿಮೆಯ ಮಂತ್ರ ದುಡಿಮೆಯ ಕಥೆ. ಬಸವಾದಿ ಶರಣರ ಪರಂಪರೆಯ ಕಾಯಕ, ದಾಸೋಹ ತತ್ವಗಳಿಗೆ ಪ್ರಯೋಗ ಶಾಲೆಯಾದ ಶ್ರೀ ಮಠದ ಸೇವೆಗೆ ಗ್ರಾಮಾಂತರ ಬಸವ ಜಯಂತಿ ಒಂದು ಮಹೋನ್ನತ ಆಯಾಮ ಕೊಟ್ಟಿದೆ. ಶೈಕ್ಷಣಿಕ ಕ್ಷೇತ್ರದಲ್ಲಿ ಸಲ್ಲಿಸಿದ ಸೇವೆ ಒಂದು ವರ್ಣನೀಯ ಗುಣವಾದರೆ ಗ್ರಾಮಾಂತರದ ಜನಸೇವೆಗೆಂದೇ ಕಲಾ ಮಾಧ್ಯಮದ ಮೂಲಕ ಅನೌಪಚಾರಿಕ ಶಿಕ್ಷಣವನ್ನು ನೀಡುತ್ತಿರುವ ಮತ್ತೊಂದು ಮುಖವಾಗಿದೆ ಬಸವ ಜಯಂತಿ. ನಾವು ಶುದ್ಧವಾದ ಬದುಕನ್ನು ನಡೆಸಿದರೆ ಪವಿತ್ರ ಚೇತನಗಳೇ ನಮ್ಮ ಬಳಿಗೆ ಬರುತ್ತವೆ ಎಂಬುದಕ್ಕೆ ಈ ಸಮಾರಂಭವೇ ಉದಾಹರಣೆ. ದೀನ ದಲಿತರ ಸ್ತ್ರೀಯರ ಜೀವನ ಹಸನಾಗಬೇಕೆಂದು ಬಸವಣ್ಣನವರು ತೆರೆದ ದಾರಿ ಮುಕ್ತವಾದದ್ದು. ಎಲ್ಲ ಸಾಂಪ್ರದಾಯಕವಾದ ಕಟ್ಟು ಕಟ್ಟಳೆಗಳಿಂದ ಮುಕ್ತವಾದದ್ದು ಬಸವಪಥ ಎಲ್ಲರದಾಯಿತು. ಆ ಪರಿಣಾಮವಾಗಿ ಉತ್ತಮ ಜೀವನ ಮೌಲ್ಯಗಳು ಅರಳಿದವು ಎಂಬುದಾಗಿ ಶ್ರೀ ಸಿದ್ಧಗಂಗಾ ಸಂಜೆ ಕಾಲೇಜಿನ ಪ್ರಾಚಾರ್ಯರಾದ ಶ್ರೀ ಬಿ. ವೀರಭದ್ರಯ್ಯನವರು ಉಪನ್ಯಾಸ ಮಾಡಿದರು.

ದೊಡ್ಡಸಾರಂಗಿಯ ರೈತ ಬಂಧು, ಶರಣ ಜೀವಿ ಶ್ರೀ ಮೃತ್ಯುಂಜಯಪ್ಪನವರು ಮಾತನಾಡುತ್ತ ದ್ವೇಷಾಸೂಯೆಗಳನ್ನು ಬಿಟ್ಟಾಗ, ಸರಳ ಜೀವನ ನಡೆಸುವುದನ್ನು ಕಲಿತಾಗ, ಪ್ರೇಮ ವಿಶ್ವಾಸಗಳನ್ನು ಬೆಳೆಸಿಕೊಂಡಾಗ ಬಸವ ಜಯಂತಿಯನ್ನು ಆಚರಿಸಿದ್ದಕ್ಕೆ ಅರ್ಥ ಬಂದೀತು ಎನ್ನುತ್ತ 'ಗಣಪರ್ವದ' ಪ್ರಸಂಗವನ್ನು ವಿವರಿಸಿದರು.

ಜನಪದ ಸಾಹಿತ್ಯರಲ್ಲಿ ಬಸವಣ್ಣನವರು ಮೂಡಿ ಬಂದಿರುವುದನ್ನು ಕುರಿತು ಶ್ರೀ ಹೆಚ್. ವಿ. ವೀರಭದ್ರಯ್ಯನವರು ವಿವರಿಸುತ್ತ ಜನಪದಸಮಷ್ಟಿ ಜೀವನಕ್ಕಾಗಿ ಬಸವಣ್ಣನವರು ಮಾಡಿದ ಸುಧಾರಣಾ ವಿವರಗಳನ್ನು ತಿಳಿಸಿದರು.

ಬಸವಣ್ಣ ಕೇವಲ ಮನುಕುಲಕ್ಕೆ ಮಾತ್ರವಲ್ಲ ಸಕಲ ಜೀವರಿಗೆ ಲೇಸನೇ ಬಯಸಿದ ಮಹಾನುಭಾವರು. ಬಸವಣ್ಣನವರು ತೋರಿಸಿದ ಜೀವನ ಕ್ರಿಯಾಶೀಲವಾದುದು. ಔದಾರ್ಯ ಪೂರ್ಣವಾದುದು. ಕಾಯಕ ತತ್ವದ ಮೂಲಕ ಆಧ್ಯಾತ್ಮಿಕದ ರಹಸ್ಯವನ್ನು ಅರಿಯಬಹುದೆಂಬುದನ್ನು ತೋರಿಸಿಕೊಟ್ಟರು. ಜನಸೇವೆಯೆಂಬುದು ಆಧ್ಯಾತ್ಮಿಕ ಮಹೋನ್ನತ ಮುಖವೆಂದು ತಿಳಿಸಿದರು. ನಾವಿಂದು ತತ್ವಭ್ರಷ್ಟ, ಧರ್ಮಭ್ರಷ್ಟ, ರಾಷ್ಟ್ರಭ್ರಷ್ಟ, ದೈವಭ್ರಷ್ಟ, ಆತ್ಮಭ್ರಷ್ಟ ಜೀವನ ನಡೆಸಿದ್ದೇವೆ. ಇದರಿಂದ ಪಾರಾಗಬೇಕಾದರೆ ಬಸವಣ್ಣನವರು ಬೋಧಿಸಿದ ತತ್ವಗಳಿಂದ ಮಾತ್ರ


49 ನೇ ಪುಟ ನೋಡಿ


# ಬಸವ ಪ್ರತಿಜ್ಞೆ

—ಟಿ. ಎಸ್. ಮಹಾದೇವಯ್ಯ

“ನೀನಿರಿಸಿ ಮನದಲ್ಲಿ ನಾನಂಜೆನಯ್ಯ. ಮನವು ಮಹಾಘನಕ್ಕೆ ಆದರೂ ಗತಿವೊಕ್ಕುದಾಗಿ. ನೀನಿರಿಸಿದ ಧನದಲ್ಲಿ ನಾನಂಜೆನಯ್ಯಾ, ಧನವು ಸತಿಸುವ ಮಾತಾಪಿತರಿಗೆ ಹೋಗದಾಗಿ, ನೀನಿರಿಸಿದ ತನುವಿನಲ್ಲಿ ನಾನಂಜೆನಯ್ಯ, ತನುವು ಸರ್ವಾರ್ಪಿತದಲ್ಲಿ ನಿಯತ ಪ್ರಸಾದ ಭೋಗಿಯಾಗಿ. ಇದು ಕಾರಣ ವೀರಧೀರ ಸಮಗ್ರನಾಗಿ ನಿಮಗಾನಂಜೆ ಕೂಡಲ ಸಂಗಮದೇವಾ”

ಮನುಷ್ಯನ ಮನಸ್ಸು ಪರಿಶುದ್ಧವಾಗಿ ಅದು ದೇವನ ಆವಾಸ ಮಂದಿರವಾದ ನಂತರ ಮನುಷ್ಯನಿಗೆ ದೇವನಲ್ಲಿ ಪ್ರೇಮವು ಹೆಚ್ಚುತ್ತ ಹೋಗುವುದು. ಪ್ರೇಮವು ಬಹಳ ಶ್ರದ್ಧಾವಸ್ಥೆಯಲ್ಲಿರುವಾಗ ಆತನನ್ನು ಭಕ್ತನೆಂದು ಕರೆಯಬೇಕು. ಅದೇ ಭಕ್ತಿಯು ನಿಷ್ಠೆಯ ಅವಸ್ಥೆಗೆ ಬರಲು ಭಕ್ತನಿಗೆ ದೇಹದ ಮೇಲಿನ ಮತ್ತೆ ಎಲ್ಲದರ ಮೇಲಿನ ಆಸೆಗಳು ಅಡಗಿ ಹೋಗುತ್ತವೆ. ಎಲ್ಲೆಡೆಯು ದೇವನೊಬ್ಬನೆ ಕಾಣಿಸುತ್ತಾನೆ. ತಾನು ಮಾಡುವ ಕೆಲಸವೆಲ್ಲವೂ ದೇವನಿಗಾಗಿ ಎಂದು ತಿಳಿದು ಉಗ್ರರೀತಿಯಿಂದ ದೇವನ ಆರಾಧನೆ ಮಾಡಿ ಮಹೇಶ್ವರನಾಗಿರುತ್ತಾನೆ. ಆದರ ಕೊನೆಕೊನೆಯಲ್ಲಿ ನಿಷ್ಠಾಭಕ್ತಿಯು ಅವಧಾನ ಭಕ್ತಿಯ ಪರಿಪಾಕ ಹೊಂದುವಾಗ ಕೆಲಸ ಮಾಡುತ್ತಿರುವವನು ನಾನು ಮಾಡಿಸುವವನು ಪರಮಾತ್ಮನಿರುತ್ತಾನೆ. ನಾನು ನೆಪಮಾತ್ರ ಸೂತ್ರದ ಗೊಂಬೆಯಂತಿರುತ್ತೇನೆ. —ಎಂಬುದರ ಅನುಭವವಾಗುತ್ತದೆ. ಅದನ್ನೆ ಅರವಿಂದ ಘೋಷರು ಹೀಗೆ ನುಡಿದಿರುವರು—ನೀನು ಮಾತೆಯ ಒಂದು ಆಯುಧವೇ ಹೊರತು ಸ್ವತಂತ್ರನಲ್ಲವೆಂಬುದನ್ನು ತಿಳಿವ ಅವಸ್ಥೆಯು ನಿನಗೊಮ್ಮೆ ಬರುವುದು. ಆಗ ದೈವೀಶಕ್ತಿಯು ನಿನಗೆ ಉತ್ಸಾಹ ತುಂಬಿ ನಿನ್ನಿಂದ ಕೆಲಸ ಮಾಡಿಸುತ್ತದೆ. ಎಂಬುದೇ ಆ ನುಡಿಗಳ ಅರ್ಥ. ಭಗವಾನ್ ರಾಮಕೃಷ್ಣ ಪರಮಹಂಸರು ಇದನ್ನು ತಮ್ಮ ಪ್ರತಿ ವ್ಯವಹಾರದಲ್ಲೂ ಅನುಭವಿಸಿಸುತ್ತಿದ್ದರು. ಅವರು ಮಾಡುವ ಕೆಲಸಗಳಿಗೆಲ್ಲ ಜಗನ್ಮಾತೆಯೇ ಕರ್ತೃವೆಂದು ಭಾವಿಸಿ ಮಾಡುವವಳು, ಮಾಡಿಸುವವಳು ಎಲ್ಲವೂ ಆ ಜಗನ್ಮಾತೆ. ಅನ್ನುತ್ತಿದ್ದರು ಮತ್ತು ಅದನ್ನು ಅನುಭವಿಸುತ್ತಿದ್ದರು. ಈ ಅವಸ್ಥೆಯನ್ನು ಎಲ್ಲ ಭಕ್ತರೂ ಸಾಧನ ಪಥದಲ್ಲಿ ಸಾಗುವಾಗ ಅನುಭವಿಸುವರು. ತಾವು ಮಾಡುವ ಕೆಲಸಗಳನ್ನು ದೇವರು ತನ್ನ ಕಡೆಯಿಂದ ಮಾಡಿಸುತ್ತಿರುವನೆಂದು ಮಾಡುವ ಕೈಗಳಲ್ಲಿ ದೈವೀಶಕ್ತಿಯ ಆವಿರ್ಭಾವನೆಯಾಗಿ, ನುಡಿವ ನುಡಿಯೆಲ್ಲಾ ದೈವೀವಾಣಿಯಾಗಿ, ಕರ್ಮಮಾಡಿಸುತ್ತದೆಂದು ಭಾವಿಸಿದರೇ ಮನುಷ್ಯನಿಗೆ ಆತ್ಮ ಸಾಕ್ಷಾತ್ಕಾರದ

ಅನುಭವವಾಗುವುದು. ಇದನ್ನು ಅನುಭವಿಸಿದ ಸ್ವಾಮಿ ರಾಮತೀರ್ಥರು ತಮ್ಮ ತಂದೆಗೆ ಬರೆದ ಒಂದು ಪತ್ರದಲ್ಲಿ ಹೀಗೆ ಹೇಳಿರುವರು. "ನಿಮಗೆ ಬೇಕಾದದ್ದನೆಲ್ಲಾ ಒಡೆಯನ ಕಡೆಯಿಂದಲೇ ಕೇಳಿಕೊಳ್ಳಿರಿ. ಅವನು ಅದನ್ನು ನಿಮಗೆ ಕೊಡುವನು. ಅಥವಾ ನನಗೆ ಕಳಿಸಲಿಕ್ಕೆ ಅಪ್ಪಣೆ ಮಾಡುವನು."

ಈ ಅವಸ್ಥೆಯಲ್ಲಿ ಮನುಷ್ಯನಿಗೆ ಬಿಗಿಯಲ್ಪಟ್ಟ ನಿಯಮಗಳ ಕಟ್ಟು ತಾನಾಗಿ ಕಳಚಿ ಬಿದ್ದಂತೆ ಕಾಣುವುದು. ತನ್ನ ಬಲದ ಆಧಾರದಿಂದ ಕರ್ಮ ಮಾಡುತ್ತಿದ್ದವನಿಗೆ ದೇವನ ನೆರವು ಸಿಕ್ಕಿ ಎಲ್ಲವನ್ನೂ ಅವನೇ ಮಾಡಿಸಲಾರಂಭಿಸಿದರೆ ಭಕ್ತನ ತಲೆಯ ಮೇಲಿನ ದೊಡ್ಡ ಹೊರೆಯೊಂದು ಕೆಳಗಿಳಿದಂತೆ ಅವನಿಗೆ ಅನುಭವವಾಗುವುದು. ಇದನ್ನೇ ಬಸವೇಶ್ವರನು ಅನುಭವಿಸಿರುತ್ತಾನೆ. ಸ್ವಾಮಿ ವಿವೇಕಾನಂದರು ಇದನ್ನೇ ಹೀಗೆ ನುಡಿದಿರುವರು. "ದೈವೀ ಆಶೀರ್ವಾದವು ಆತ್ಮನ ಎಲ್ಲ ಕಟ್ಟುಗಳನ್ನು ಕಡಿಸಲು ಅದು ಸ್ವತಂತ್ರವಾಗುತ್ತದೆ." ಆತ್ಮ ಸ್ವಾತಂತ್ರ್ಯದ ಕುರುಹು ಇಲ್ಲಿ ಹೊರಗೆಡವಲ್ಪಟ್ಟಿದೆ.

ತಾನು ಮಾಡಿದ ಗುರುಲಿಂಗ ಜಂಗಮದ ಸೇವೆಯು ಹೇಗೆ ಶ್ರೇಷ್ಠತರವಾದುದೆಂಬುದನ್ನು ಇಲ್ಲಿ ಬಸವೇಶ್ವರನು ನುಡಿದಿರುವನು. ಮನವು ಪರಮಾತ್ಮನಲ್ಲಿ ಸೇರಬೇಕೆಂಬುದು ಪರಮಾತ್ಮನ ಇಚ್ಛೆ. ಹಾಗೆಯೇ ಧನವು ತನ್ನ ಬಂಧು-ಬಳಗಕ್ಕಲ್ಲ ದೇವನ ಸೇವೆಗೆ. ತನುವೂ ಜಗತ್ತಿನ ಸೇವೆಗೆ ಅರ್ಪಿತವಾಗಿದೆ. ಅದು ಬಹುದೊಡ್ಡ ತ್ಯಾಗವೇ ಸರಿ. ಇದನ್ನಲ್ಲಿ ಅನುಭವಿಸಿ ಹೀಗೆಂದಿರುವನು. "ನೀನಿರಿಸಿದ ಕಡೆಯಲ್ಲಿ ನನ್ನ ಮನಸ್ಸು ಅಲುಗದೆ ನಿಂತಿರುತ್ತದೆ. ಏಕೆಂದರೆ ಅದು ಶ್ರೇಷ್ಠತಮವಾದ ಪರಮಾತ್ಮನಲ್ಲಿ ಸೇರಿತು. ಮಾತಾ-ಪಿತ ಸತಿ-ಸುತರಿಗೆ ಧನವು ಸೇರಿ ವ್ಯರ್ಥವಾಗದೆ ನಿನ್ನ ಇಚ್ಛೆಯಂತೆ ನಿನ್ನ ಸೇವೆಗೆ ಸೇರಿತು. ಹಾಗೆಯೇ ತನುವಾದರೂ ಜಗತ್ತಿನ ಸೇವೆಗರ್ಪಿತವಾಯಿತು. ಆದುದರಿಂದ ನಾನು ಹೆದರುವುದಿಲ್ಲ. ಎಲ್ಲವನ್ನು ನಿನಗರ್ಪಿಸಿ ಶ್ರೇಷ್ಠತರನಾದ ನಿಕಟ ಸಂಬಂಧದ ಪ್ರಸಾದಿಯಾಗಿರುತ್ತೇನೆ. ಆದುದರಿಂದ ನಿನಗೆ ಹೆದರುವುದಿಲ್ಲ ಪರಮಾತ್ಮ."

"ಹಾಲನೇಮ, ಹಾಲ ಕೆನೆಯ ನೇಮ ;
ಕೆನೆ ತಪ್ಪಿದ ಬಳಿಕ ಕಿಚ್ಚಡಿಯ ನೇಮ ;
ಬೆಣ್ಣೆಯ ನೇಮ, ಬೆಲ್ಲದ ನೇಮ ;
ಅಂಬಲಿಯ ನೇಮದವರನಾರನೂ ಕಾಣೆ !
ಕೂಡಲ ಸಂಗನ ಶರಣರಲ್ಲಿ,
ಅಂಬಲಿಯ ನೇಮದಾತ ಮಾದಾರ ಚೆನ್ನಯ್ಯ!"



# ಧಾರ್ಮಿಕ ಕ್ಷೇತ್ರ "ಬಸವ ಕಲ್ಯಾಣ"

— ಸಂ. ರವಿಶಂಕರ

100. ವಿದ್ಯಾಪೀಠ. ಪಿ. ಟಿ. ಐ. ಬಡಾವಣೆ ಬನಶಂಕರಿ 3 ನೇಹಂತ. ಬೆಂಗಳೂರು-85

ಬೀದರ ಜಿಲ್ಲೆಯ ಬಸವ ಕಲ್ಯಾಣ ತನ್ನ ಹೆಸರಿನಂತೆಯೇ ಕಲ್ಯಾಣದಾಯಕವಾದ ಪ್ರೇಕ್ಷಣೀಯ ಸ್ಥಳವೆಂದರೆ ಅತಿಶಯೋಕ್ತಿಯಲ್ಲ. ಹುಮ್ನಾಬಾದಿಗೆ 15 ಮೈಲಿ ದೂರದಲ್ಲಿರುವ ಇದು ಐತಿಹಾಸಿಕವಾಗಿಯೂ ಸಾಮಾಜಿಕ ಮತ್ತು ಆಧ್ಯಾತ್ಮಿಕವಾಗಿಯೂ ಪ್ರಸಿದ್ಧಿ ಪಡೆದ ಸ್ಥಳ. ಜಗಜ್ಯೋತಿ ಬಸವೇಶ್ವರರಂತಹ ಅನೇಕ ವಚನಕಾರರು ಧಾರ್ಮಿಕ ಕ್ರಾಂತಿ ಮಾಡಿದ ಸ್ಥಳ. ಇಂತಹ ಸ್ಥಳವನ್ನು ಕಣ್ಣಾರೆ ಕಂಡು ಆನಂದ ಹೊಂದುವ ಮಾನವನೇ ಧನ್ಯ. ಇದರ ಸೂಕ್ಷ್ಮಪರಿಚಯ ಇಲ್ಲಿದೆ.

ಬಸವ ಕಲ್ಯಾಣದ ಕರಿಕಲ್ಲಿನ ಕೋಟೆ ಈಗಲೂ ಭದ್ರವಾಗಿದ್ದು ಸುಸ್ಥಿತಿಯಲ್ಲಿದೆ. ಇದರ ವೈಶಿಷ್ಟ್ಯವೆಂದರೆ ಈ ಕೋಟೆ ಕಾಲ ಕಾಲಕ್ಕೆ ಬೇರೆ ಬೇರೆಯವರ ಆಳ್ವಿಕೆಯಲ್ಲಿ ಹೊಸ ಹೊಸದಾಗಿ ರಚಿಸಲ್ಪಟ್ಟಿದೆ. ಈ ಕೋಟೆಯೊಳಗೆ ಪುರಾತನ ದ್ವಾರಗಳು, ತೋಪು, ತೋಪಿನ ಗುಂಡುಗಳು ಇವೆ. ಇಲ್ಲಿರುವ "ನಾಗರಾಜ" ಎಂಬ ತೋಪು '92' ಅಡಿ ಉದ್ದ ಇದೆ. ಇಲ್ಲಿ ಚಾಲುಕ್ಯರ ಕಾಲದ ದೇವಸ್ಥಾನವಿದೆ. ಈ ದೇವಾಲಯದ ಮೇಲೆ ಗಣೇಶನ ವಿಗ್ರಹವಿದ್ದರೂ ಗರ್ಭಾಂಗಣದಲ್ಲಿ ಯಾವುದೇ ಮೂರ್ತಿಯಿಲ್ಲ. ಈ ಕೋಟೆಯಲ್ಲಿ 'ಚರತ ಮೋಟ' ಎಂಬ ರಾಟೆಯಿದೆ. ಇದಕ್ಕೆ ಹಿಂದೆ ಕೋಣಗಳನ್ನು ಕಟ್ಟಿ ಬಾವಿಯಿಂದ ನೀರು ಸೇದಿಸಿ ಎಲ್ಲಾ ಕಡೆಗೂ ನೀರು ವ್ಯವಸ್ಥೆಯನ್ನು ಅಚ್ಚುಕಟ್ಟಾಗಿ ಮಾಡುತ್ತಿದ್ದರು ಎಂಬುದು ಇಂದಿನ ನಮ್ಮ ನೀರು ಸರಬರಾಜು ವ್ಯವಸ್ಥೆಗಿಂತ ಮೇಲ್ಮಟ್ಟದ್ದಾಗಿತ್ತೆಂಬುದು ಆಶ್ಚರ್ಯವೇ ಸರಿ.

ಊರಿಗೆ ಅತಿ ಸಮೀಪದಲ್ಲಿರುವ ಬಿಜ್ಜಳರಾಯನ ಅರಮನೆಯ ದಿಬ್ಬವು 100 ಅಡಿ ಉದ್ದ 70 ಅಡಿ ಅಗಲವಿದ್ದು ಇದು 10 ಅಡಿ ಎತ್ತರವಾಗಿದೆ. ಇದರ ಹತ್ತಿರ ಹಿಂದಿನ ಕಾಲದ ಕೋಟೆ ಕಂಬಗಳ ಕುರುಹುಗಳು ಇವೆ. ಈಗ ಇಲ್ಲಿ ಒಂದು ಅತಿಥಿ ಮಂದಿರವನ್ನು ಕಟ್ಟಿದ್ದಾರೆ. ಅಲ್ಲದೆ ಈ ಊರಿನಲ್ಲಿ ಇರುವ ಕಂಬಳಿ ಮಠ, ಗಚ್ಚಿನ ಮಠ, ಸದಾನಂದ ಮಠಗಳು, ತನ್ನದೇ ಆದ ವೈಶಿಷ್ಟ್ಯತೆಯಿಂದ ಕೂಡಿದ್ದು ದಾಸೋಹಕ್ಕೆ, ಧಾರ್ಮಿಕತೆಗೆ ಹೆಸರಾಗಿದೆ. ಇಲ್ಲಿರುವ ಆದಿಗಣಪತಿಯ ವಿಗ್ರಹದ ಮುಖವು ಮಾನವನ ಮುಖದಂತಿದ್ದು ಸುಂದರವಾಗಿದೆ.

ಬಸವ ಕಲ್ಯಾಣಕ್ಕೆ 3 ಮೈಲಿ ದೂರದಲ್ಲಿ ತ್ರಿಪುರಾಂತಕ ಎಂಬ ಊರಿದೆ. ಇಲ್ಲಿಯ ಕೆರೆ, ದೇವಾಲಯ, ಬಸದಿಗಳ ವರ್ಣನೆ ಬಿಲ್ಹಣನ ವಿಕ್ರಮಾಂಕಚರಿತೆಯಲ್ಲಿ ವಿಶದವಾಗಿದೆ. ಈ ಊರಿನ ಸುತ್ತಲೂ ಶಿವ-ಶರಣರು ವಾಸಮಾಡಿದ ಗವಿಗಳು ಮಠಗಳು, ಧರ್ಮ ಶಾಲೆಗಳೂ ಇವೆ. ತ್ರಿಪುರಾಂತಕ ಕೆರೆಯ ಪಶ್ಚಿಮಕ್ಕೆ 'ಕಾಲಜ್ಞಾನ' ವನ್ನು ರಚಿಸಿದ ರುದ್ರಮುನಿಗಳ ಗವಿಯೂ ಈ ಗವಿಯ ಉತ್ತರಕ್ಕೆ "ಮಿತಾಕ್ಷರ ಸಂಹಿತೆ" ಯನ್ನು ರಚಿಸಿದ ವಿಜ್ಞಾನೇಶ್ವರರ ಗವಿಯೂ ಮತ್ತು ಸಮೀಪದಲ್ಲಿಯೇ ಮುಸಲ್ಮಾನ ಪದ್ಧತಿಯಲ್ಲಿ ಕಟ್ಟಿರುವ ಗುಡಿಯಲ್ಲಿ "ಪ್ರಭುದೇವರ ಗದ್ದುಗೆ" ಇದೆ. ಈ ಗುಡಿಗೆ ದಕ್ಷಿಣದಲ್ಲಿ ಮಡಿವಾಳ ಮಾಚಿದೇವರ ಗುಡಿ ಇದೆ.

ಮಡಿವಾಳ ಮಾಚಿದೇವರ ಗುಡಿಯಲ್ಲಿ ಎರಡು ಲಿಂಗಗಳು ಇದ್ದು ಈ ದೇವಾಲಯವೂ ಕೂಡಾ ಮುಸಲ್ಮಾನ ಶೈಲಿ ಹೊಂದಿದೆ. ಬಸವ ಕಲ್ಯಾಣದಿಂದ ಶಿವಪುರಕ್ಕೆ ಹೋಗುವ ದಾರಿಯಲ್ಲಿ ಸಿದ್ಧೇಶ್ವರರ ಗುಡಿ ಇದೆ. ಈ ಸ್ಥಳ ಶಿವಯೋಗಿ ಸಿದ್ಧೇಶ್ವರರು ದೀಕ್ಷೆ ಸ್ವೀಕರಿಸಿದ ಸ್ಥಳವೆಂದು ಪ್ರಸಿದ್ಧಿಯಾಗಿದೆ.

ಈ ರೀತಿ ಬಸವೇಶ್ವರರು ಒಂದು ಮಹೋನ್ನತವಾದ. ಧಾರ್ಮಿಕ ಸಾಮಾಜಿಕ ಮತ್ತು ಸಾಹಿತ್ಯ ಕ್ರಾಂತಿಯನ್ನು ಮಾಡಿದ ಸ್ಥಳವಾದ ಬಸವಕಲ್ಯಾಣ ಇಂದು ಜಗತ್ಪ್ರಸಿದ್ಧವಾಗಿದೆ. ಅವರು ಸ್ಥಾಪಿಸಿದ ಅನುಭವ ಮಂಟಪ ತತ್ರಜ್ಞಾನದ ವಿಶ್ವ ವಿದ್ಯಾನಿಲಯವಾಗಿ ಪರಿಣಮಿಸಿದೆ. ಈ ಮಂಟಪಕ್ಕೆ ಭಾರತದ ನಾನಾ ಕಡೆಗಳಿಂದ ಪಂಡಿತರು ಜ್ಞಾನಿಗಳು, ದಾರ್ಶನಿಕರು ಬಂದು ಅನುಭವಿಕ ಚರ್ಚೆಗಳಲ್ಲಿ ಭಾಗವಹಿಸಿ ಅಪೂರ್ವವಾದ ವಚನ ಸಾಹಿತ್ಯ ನಿರ್ಮಾಣಕ್ಕೆ ಕಾರಣರಾಗಿದ್ದಾರೆ. ಈ ಮಂಟಪದ ಚರ್ಚೆಯಲ್ಲಿ ಮಹಿಳೆಯರೂ ಭಾಗವಹಿಸಿ ವಚನ ಸಾಹಿತ್ಯ ರಚನೆಯಲ್ಲಿ ಪಾಲ್ಗೊಂಡಿರುವುದು ಹೆಮ್ಮೆಯ ಸಂಗತಿ. ಈ ರೀತಿ ಸಾಹಿತ್ಯಕವಾಗಿ, ಧಾರ್ಮಿಕವಾಗಿ, ಸಾಂಸ್ಕೃತಿಕವಾಗಿ ಮುನ್ನುಗ್ಗುತ್ತ ಪ್ರಸಿದ್ಧಿಯಾಗಿರುವ ಬಸವ ಕಲ್ಯಾಣದ ದರ್ಶನ ನಿಜವಾಗಲು ಅಜರಾಮರವಾದುದು.

---

"ಗಂಡನ ಮೇಲೆ ಸ್ನೇಹವಿಲ್ಲದ ಹೆಂಡತಿ
ಲಿಂಗದ ಮೇಲೆ ನಿಷ್ಠೆಯಿಲ್ಲದ ಭಕ್ತ
ಇದ್ದರೇನೋ ಶಿವ ಶಿವಾ ; ಹೋದರೇನೋ ಶಿವ ಶಿವಾ ?
ಕೂಡಲ ಸಂಗಮ ದೇವಯ್ಯಾ,
ಊಡದ ಆವಿಂಗೆ ಉಣ್ಣಿ ಕರುವ ಬಿಟ್ಟಂತೆ ?





# ದಿವ್ಯವಾಣಿ

—ವೀರಭದ್ರಪ್ಪಾ ಚ. ಅಂದಾನಿ, ಗೋಕಾಕ.

ಮನದ ರುಚಿಯೇ ಕಾಮ, ಕಾಮದ ಮೂಲ ಸಂಕಲ್ಪ. ವಿಷಯ ಭೋಗದಿಂದ ತೃಪ್ತಿಹೊಂದದೆ ಭೋಗಕ್ಕೆ ಜಾಗೃತವಾಗುವುದೇ ಕಾಮದ ಪ್ರಾಮುಖ್ಯ ಪಾತ್ರ. ಕಾಮಾದಿಗಳೇ ಮನುಷ್ಯನ ಆರು ವೈರಿಗಳು, ಈ ಎಲ್ಲ ವೈರಿಗಳಿಗೆ ಕಾಮನೆ ಸೂತ್ರಧಾರ ಕಾಮದಂತೆ ಕರ್ಮಗಳು-ಕರ್ಮಗಳಂತೆ ಪುಣ್ಯಪಾಪಗಳು. ಪುಣ್ಯ-ಪಾಪಗಳ ಫಲವೇ ಸುಖ-ದುಃಖಗಳು. ಕಾಮವೆಂಬ ವೈರಿಯನ್ನು ಕೊಂದವನು ಕಾಲನನ್ನೂ ಗೆಲ್ಲಬಲ್ಲ. ಸಾಯುವತನಕ ರಾಮನಾಮ ಅಂದರೂ ಮರಣ ಕಾಲಕ್ಕೆ ವಾಸನಾ ಬಲದಿಂದ ರಾಮನ ಬದಲಾಗಿ ಕಾಮವೇ ಬರುವದು. ವಾಸನಾ ಕ್ಷಯದಿಂದ ಮನೋಲಯ. ಇಂದ್ರಿಯ ಸಂಯಮಕ್ಕೆ ಮನದ ಸಂಯಮ ಬೇಕು. ಮನದ ಸಂಯಮಕ್ಕೆ ಕಾಮನೆಗಳ ತ್ಯಾಗ ಬೇಕು. ಕಾಮ-ಭೋಗ ವಸ್ತುಗಳ ಉಪಭೋಗದಿಂದ ಕಾಮವು ಶಮನವಾಗಲಾರದು. ಕಾಮನಿವೃತ್ತಿಯಿಂದಲೇ ಮನದ ಸ್ಥಿರತೆ. ಕಾಮನೆಗಳ ತ್ಯಾಗದಲ್ಲಿಯೇ ಬ್ರಹ್ಮಾನುಭವದ ರಸಸ್ವಾದ. ವಿಷಯಗಳ ಸಾಧನೆಗೆ ಎಡೆಗೊಡದೆ ಮೋಕ್ಷ ಸಾಧನೆಗೆ ಎಡೆಗೊಟ್ಟರೆ ಕಾಮನು ಪರಮ ಪುರುಷಾರ್ಥವನ್ನು ಸಾಧಿಸಬಲ್ಲ. ಸಂಸ್ಕಾರ ಸಮೂಲ ಕಾಮನಷ್ಟವಾದವನ ಹೃದಯದಲ್ಲಿ ಬಯಕೆಗಳ ಆಸ್ಪದವಿಲ್ಲ. ಕಾಮಾತುರನಿಗೆ ಭಯ, ನಾಚಿಕೆಗಳು ಕನಸಿನಲ್ಲಿಯೂ ಸಹ ಸುಳಿಯಲಾರವು.

ವಿಷಯಗಳಲ್ಲಿಯ ವಿರಾಗವೇ ವೈರಾಗ್ಯ. ಭೋಗಿಸುವ ಶಕ್ತಿ ಶರೀರದಲ್ಲಿದ್ದು ಭೋಗಿಸಲ್ಪಡುವ ಪದಾರ್ಥಗಳು ಅನಾಯಾಸವಾಗಿ ದೊರೆತರೂ ಅವುಗಳನ್ನು ಮನಸಾ ತ್ಯಜಿಸುವದೇ ವೈರಾಗ್ಯ. ಪರಸತಿ, ಪರಧನ, ಪರರ ಪದಾರ್ಥಗಳಲ್ಲಿ ಮನವು ಸೋಲದಿರುವದೆ ವಿರತಿ ರಾಗವು ಬಂಧನಕ್ಕೆ ಕಾರಣ, ವೈರಾಗ್ಯವು ಮೋಕ್ಷಕ್ಕೆ ಸಾಧನ. ಆಶೆಯೇ ಪರಮ ಶತ್ರು, ವೈರಾಗ್ಯವೇ ಪರಮ ಮಿತ್ರ. ಜೀವನ್ಮುಕ್ತನಿಗೆ ರಾಗವೂ ಇಲ್ಲ ವೈರಾಗ್ಯವೂ ಇಲ್ಲ, ಜೀವನನ್ನು ಸಂಸಾರ ಬಂಧನಕ್ಕೆ ಗುರಿಮಾಡುವದೇ ರಾಗರಸ. ಸಂಸಾರ ರಸನೀಗದೆ ಪ್ರಪಂಚದಲ್ಲಿ ವೈರಾಗ್ಯಬಾರದು. ವಿಷಯಗಳಲ್ಲಿಯ ರಾಗ, ರೂಪ, ರಸವನ್ನೂ ಬಿಟ್ಟವನೆ ಜ್ಞಾನಿ. ವೈರಾಗ್ಯವಂತನಿಗೆ ಇಂದ್ರಿಯ ಸಂಯಮರೂಪ ದಮವು ಜ್ಞಾನಮಾರ್ಗಕ್ಕೆ ಒಳ್ಳೆ ಸಾಧನ. ವೈರಾಗ್ಯವೇ ಭಾಗ್ಯ. ಸ್ಮಶಾನ ಯಾತ್ರೆಯಲ್ಲಿ ಬರುವ ಸ್ಮಶಾನ ವೈರಾಗ್ಯ, ಪುರಾಣ-ಪ್ರವಚನ ಕಾಲಕ್ಕೆ ಬರುವ ಪುರಾಣ ವೈರಾಗ್ಯ ಪ್ರಸೂತಿ ಕಾಲಕ್ಕೆ ಬರುವ ಪ್ರಸೂತಿ ವೈರಾಗ್ಯ

ಇವು ಕ್ಷಣಿಕವಾದವುಗಳು, ನಿಜ ವೈರಾಗ್ಯವು ನಿತ್ಯ ಜೀವನದಲ್ಲಿ ಬಂದರೆ ದುಃಖವೆಂಬುದೇ ಇರುವುದಿಲ್ಲ. ವೈರಾಗ್ಯ ಶಿಖರವನ್ನೇರಿ ತಮ್ಮ ತಾವರಿದು ತಾವೇ ಆದರೆ ತಾವೇ ಆ ಬ್ರಹ್ಮವೆಂಬ ಭಾವದಲ್ಲಿ ಬೆರೆದು ಬಯಲಾದರು ಮಹಾನುಭಾವರು. ಊಟಕ್ಕೆ ಒಂದು ತುತ್ತು ಅನ್ನ ಕುಡಿಯಲು ಒಂದು ಬೊಗಸೆ ನೀರು ಒರಗಲು ತೋಳಿನ ದಿಂಬು ಇಷ್ಟಿದ್ದರೆ ನಾನು ಸುಖಿ ಅಂತ ವೈರಾಗ್ಯವಂತನ ಮಾತು.

ದೇಹ ಮನ ಬುದ್ಧಿ, ಕರಣಗಳನ್ನು ಮೀರಿ ನಾನು ನನ್ನದು ನೀನು ನಿನ್ನದು ಎಂಬ ಇತಿಮಿತಿಗಳನ್ನು ಮೀರಿ ನಿಂತಲ್ಲಿ, ತನು ಮನ ಭಾವದ ಬಯಕೆಗಳು ಹಿಂಗಿದಲ್ಲಿ ನಿಜ ಸುಖದ ನೆಲವಿದೆ. ಸುಖವು ಐಹಿಕ ಭೋಗಗಳಲ್ಲಿರದೆ ಮನದ ನಿಶ್ಚಿಂತತೆಯಲ್ಲಿದೆ. ರಾಗರೋಗಿಯು ಮನಸಿನವನಿಗೆ ಸುಖ ದೊರೆಯದು. ರಾಗವೇ ಬಡತನ ವಿರಾಗವೇ ಸಿರಿತನ, ರಾಗವೇ ದಾಸತ್ವ-ವಿರಾಗವೇ ಈಶತ್ವ. ಆಶೆಯೇ ದುಃಖ, ನಿರಾಶೆಯೇ ಸುಖ. ಆಶೆಯೇ ಬಡತನ, ತೃಪ್ತಿಯೇ ಸುಖಸಂಪತ್ತು. ಪರವಶತೆಯೇ ದುಃಖ ಆತ್ಮವಶತೆಯೇ ಸುಖ. ವೈರಾಗ್ಯಕ್ಕಿಂತ ಯಾವ ಸೌಖ್ಯ ಸಂಪದವಿಲ್ಲ. ಬದುಕಿ ದೇಹದೊಡನೆ ಇರುವಾಗಲೆ ಕಾಮ ಕ್ರೋಧಗಳ ವೇಗವನ್ನು ಸಹಿಸಬಲ್ಲವನೆ ಸುಖವಂತನು. ವಿಷಯಗಳಲ್ಲಿಯ ಅನುಕೂಲ ಪ್ರತಿಕೂಲ ವೃತ್ತಿಗಳನ್ನು ಬಿಡುವಲ್ಲಿಯೇ ಸುಖವಿದೆ. ಇಚ್ಛಿತ ಪದಾರ್ಥಗಳು ದೊರಕಿದಂತೆ ಆಶೆ ಹೆಚ್ಚುತ್ತಲೇ ಹೋಗುವದಲ್ಲದೆ ತೃಪ್ತಿಯಾಗದು. ಅವಶ್ಯಕತೆಗಳು ಕಡಿಮೆಯಾದಂತೆ ತೃಪ್ತಿ ಹೆಚ್ಚುತ್ತಲೇ ಹೋಗುವದು. ನಿರಪೇಕ್ಷೆಯಲ್ಲಿಯೇ ಸುಖದ ಮೂಲ. ಸಕಲೇಂದ್ರಿಯಗಳನ್ನು ವಶಪಡಿಸಿಕೊಂಡು ಮನದ ಮಡಿಲಿನಲ್ಲಿ ವಾಸಮಾಡಿರುವ ಸಂಸಾರ ವಿಷಯಗಳ ಸಕಲ ವಾಸನೆಗಳನ್ನು ನಾಶಮಾಡಿಕೊಂಡವನಲ್ಲಿ ಸುಖವಿದೆ. ಬೇರೆ ಬೇರೆ ಭಾವಿಸಿ ಬ್ರಹ್ಮಜ್ಞಾನವಂದಿಲ್ಲದವನಿಗೆ ತೋರದು ಸುಖ. ಸುಖಿಯಾಗಿ ಬಾಳಲು ಬಯಸುವಿಯಾದರೆ ವಿವೇಕಿಯಾಗಿ ಬಾಳು, ನ್ಯಾಯವಾಗಿ ಬಾಳು, ಔದಾರ್ಯವಾಗಿ ಬಾಳು.

ಸುಖ-ದುಃಖಗಳನ್ನು ಪರಿಗ್ರಹಿಸುವ ಸಾಧನವೇ ಮನಸ್ಸು. ದೇಹ ಆತ್ಮಗಳ ಸಂಗ ನಿಸ್ಸಂಗ ವಿಷಯದಲ್ಲಿ, ಸಂಯೋಗ ವಿಯೋಗ ವಿಚಾರದಲ್ಲಿ ಮನಸ್ಸಿನ ಪಾತ್ರ ಮುಖ್ಯ. ದೇಹೇಂದ್ರಿಯಕರಣಗಳ ವ್ಯಾಪಾರಕ್ಕೆ ಬೇಕು ಬೇಡೆಂಬೆರಡರಲ್ಲಿ ಹರಿದಾಡಲಿಕ್ಕೆ ಮನದಾಟವೇ ಕಾರಣ. ಮಾಯೆಯಾದರೂ ಅಲ್ಲ, ಮನದ ಮುಂದಿನ ಆಶೆಯೆ ಮಾಯೆ. ಮನಸಿನಂತೆ ಕರ್ಮಗಳು, ಕರ್ಮಗಳಂತೆ ಪುಣ್ಯ-ಪಾಪಗಳು, ಪುಣ್ಯ-ಪಾಪಗಳಿಂದ ಸುಖ-ದುಃಖಗಳು. ಅವಿರಳ ಜ್ಞಾನದಿಂದ ಭಗವಂತನನ್ನು ಅನುರಕ್ತಿಯಿಂದ ಪೂಜಿಸುವಂತೆ ಮಾನಸಿಕ ತಪಸ್ಸು. ಬಂಧನಕ್ಕೂ ಮೋಕ್ಷಕ್ಕೂ ಮನಸ್ಸೇ ಕಾರಣ. ಚಿತ್‌ವೃತ್ತಿಯನ್ನು ನಿರೋಧಿಸಿ ಮನಸ್ಸನ್ನು ಸ್ಥಿರವಾಗಿ ನಿಲ್ಲಿಸಿ



ಲಯಗೊಳಿಸುವದೇ ಯೋಗದ ಗುರಿ. ಲಯವಾದ ಮನಸ್ಸಿಗೆ ನಿರ್ವಾಸನೆ ಸಾಕ್ಷಿ. ವಾಸನಾಕ್ಷಯವಾಗಿ ಮನೋಲಯದಲ್ಲಿ ನಿಜವಸ್ತು ಒಂದೇ ಉಳಿಯುವದು. ಅದೇ ತನ್ನ ನಿಜಸ್ಥಿತಿ. ಚಿತೆಯು ನಿರ್ಜೀವ ವಸ್ತುವನ್ನು ದಹಿಸಿದರೆ ಚಿಂತೆಯು ಜೀವಂತವುಳ್ಳ ಮನುಷ್ಯನನ್ನು ಸುಡುವುದು. ಸಮರಸ ಐಕ್ಯಗಳು ಮನಸಿನ ಪರ್ಯಾಯ ಕ್ರಿಯೆಗಳು. ಹರಿದಾಡುವ ಮನಸ್ಸನ್ನು ಸಗುಣ ಧ್ಯಾನದ ಸಹಾಯದಿಂದ ನಿರ್ಗುಣದಲ್ಲಿ ನಿಲ್ಲಿಸಿದರೆ ಆ ನಿರ್ಗುಣಜ್ಞಾನ ಬಲಿದು ಸಗುಣವು ನಿರ್ಗುಣದಲ್ಲಿ ಅಡಗಿ ಆ ನಿರ್ಗುಣವಾದ ನಿಜದಲ್ಲಿ ಮನೋಲಯವಾಗುವದೇ ಪರಮಯೋಗಂ. ಸ್ವಾಧೀನವಾದ ತನ್ನ ಮನಸ್ಸೇ ತನಗೆ ಆಪ್ತ. ಸ್ವಾಧೀನವಲ್ಲದ ತನ್ನ ಚಿತ್‌ವೇ ತನಗೆ ವೈರಿ. ಆತ್ಮನ ಆನಂದ ಮನಸಿನ ಅಚಲ ವೃತ್ತಿಯಿಂದಲೇ ಸಾಧ್ಯ.

ವಿಷಯದಲ್ಲಿ ವಿರತಿ ಇದ್ದವನೆ ಸಂನ್ಯಾಸಿ. ಅರಿವೆಯ ಕೌಪೀನವನ್ನು ಹಾಕಿಕೊಂಡವನು ಸನ್ಯಾಸಿಯಲ್ಲ. ಅರುವಿನ ಕೌಪೀನ ಧರಿಸಿದವನೆ ಸಂನ್ಯಾಸಿ. ಮನೆ ಮಡದಿ ಮಕ್ಕಳನ್ನು ಬಿಟ್ಟು ಕಾಡಿಗೆ ಹೋಗಿ ಕಡ್ಡಿಗಳ ಜೊತೆಗೆ ತಿರುಗುವವನು ಸಂನ್ಯಾಸಿಯಲ್ಲ. ಮನೆ ಮಡದಿ ಮಕ್ಕಳನ್ನು ಮನದಿಂದ ಹೊರಗಿಡುವವನೆ ಸಂನ್ಯಾಸಿ. ಜಟಾ ಬಿಟ್ಟವನು ಸಂನ್ಯಾಸಿಯಲ್ಲ. ಸಂಸಾರ ಜಂಜಾಟ ಬಿಟ್ಟವನೆ ಸಂನ್ಯಾಸಿ. ಕರ್ಮಗಳನ್ನು ಮಾಡುತ್ತ ಅವುಗಳ ಫಲಗಳನ್ನು ಅಪೇಕ್ಷಿಸದೆ ಇರುವವನೆ ಸಂನ್ಯಾಸಿ. ಬಯಸದೆ ಬಂದದ್ದಕ್ಕೆ ಸಂತುಷ್ಟನಾಗಿ ರಾಗದ್ವೇಷಗಳಿಲ್ಲದೆ ಇಷ್ಟಾನಿಷ್ಟಗಳಿಲ್ಲದ ಫಲಾಫಲಗಳಲ್ಲಿ ಸಮಸ್ಥಿತನಾಗಿ ಕರ್ಮ ಮಾಡಿದರೂ ಕರ್ಮಬಂಧನಕ್ಕೆ ಒಳಗಾಗದವನೆ ಸಂನ್ಯಾಸಿ. ಕಾಮಕ್ರೋಧಗಳಿಂದ ಉಂಟಾದ ವೇಗವನ್ನು ಸಹಿಸಿಕೊಳ್ಳಲು ಶಕ್ತನಾದವನೆ ಸಂನ್ಯಾಸಿ. ಬಾಹ್ಯ ವಿಷಯಗಳಲ್ಲಿ ಆಸಕ್ತವಾಗದೆ ಆತ್ಮ ಸುಖದಲ್ಲಿಯೇ ತೃಪ್ತಿಹೊಂದಿ ಬ್ರಹ್ಮಾನುಸಂಧಾನದಲ್ಲಿ ತನ್ಮಯನಾಗಿ ಅಕ್ಷಯ ಸುಖವನ್ನು ಸೂರೆಗೊಳ್ಳುವವನೆ ಸಂನ್ಯಾಸಿ. ಸುಖ-ದುಃಖಗಳನ್ನು ಸಮನಾಗಿ ಭಾವಿಸುವವನು ಸ್ವಾನುಭಾವಜ್ಞಾನದಿಂದ ತೃಪ್ತನಾದವನು ಎಲ್ಲರಲ್ಲಿಯೂ ಸಮಭಾವವುಳ್ಳವನು ಸ್ಥಿರ ಚಿತ್‌ವುಳ್ಳವನು ವಿಷಯ ವಾಸನೆಯನ್ನು ತಡೆದು ನಿಶ್ಚಿಂತನಾದವನೆ ಸಂನ್ಯಾಸಿ.

ವಿನಯದಿಂದ ಕೂಡಿದ ವಿದ್ಯೆ, ಸರಳತೆಯಿಂದ ಕೂಡಿದ ಅಧಿಕಾರ, ಆತ್ಮಸಂಯಮದಿಂದ ಕೂಡಿದ ವಿವೇಕ, ಶುದ್ಧವಾದ ಕಾಯಕದಿಂದ ಕೂಡಿದ ಸಂಪತ್ತು, ಸೌಜನ್ಯದಿಂದ ಕೂಡಿದ ಮಾತು, ನೀತಿಯಿಂದ ಕೂಡಿದ ನಡವಳಿಕೆ, ಸಂಪತ್ತು ವಿಪತ್ತುಗಳಲ್ಲಿ ಸಮಭಾವದಿಂದ ಕೂಡಿದ ಸ್ಥಿತಿ, ನಿಷ್ಕಾಮದಿಂದ ಮಾಡುವ ಕರ್ಮ, ನಿರ್ಮಲತ್ವದಿಂದ ಕೂಡಿದ ಮನಸ್ಸು, ಸದಾಚಾರ ಸತ್ಯಯುಕ್ತದಿಂದ ಕೂಡಿದ ಜೀವನ, ದೃಢ ಅಪರೋಕ್ಷತ್ವದಿಂದ ಕೂಡಿದ ಜ್ಞಾನ, ಅನ್ಯರ ದುಃಖ ನೋಡಿ ಕರುಣೆ ತೋರಿಸುವ ಮನುಷ್ಯತ್ವ—ಅದಕ್ಕೆ ಪರಿಹಾರ ತೋರಿಸುವ ದೈವತ್ವ, ತನ್ನಂತೆ ಪರರ ಬಗೆ

ಯುವ ಪರೋಪಕಾರದ ಮನೋಧರ್ಮ, ಸಕಲ ಜೀವರಾಶಿಗಳಿಗೆ ಲೇಸನೆ ಬಯಸುವ ಗುಣ, ವಿವೇಕಿಯಾಗಿ ನ್ಯಾಯವಾಗಿ ಔದಾರ್ಯವಾಗಿ ಬಾಳುವ ಗುಣ, ಮನಸ್ಸು, ಮಾತು ಮತ್ತು ಕೃತಿಗಳಲ್ಲಿ ಸಮನ್ವಯ ಸಾಧಿಸಿಕೊಂಡು ಬಾಳುವ ಗುಣ, ಯಾರ ಮೇಲೆಯೂ ದ್ವೇಷಭಾವನೆಯಿಲ್ಲದೆ ಇರುವದು, ಎಲ್ಲರೊಡನೆಯೂ ಮೈತ್ರಿ ಭಾವತ್ವದಿಂದಿರುವದು, ಕಷ್ಟ ಸ್ಥಿತಿಯಲ್ಲಿರುವವರ ವಿಷಯದಲ್ಲಿ ಅನುಕಂಪನ ತೋರಿಸುವದು, ನಾನು ನನ್ನದು ಎಂಬ ಅಹಂಕಾರವಿಲ್ಲದೆ ಇರುವದು, ಸುಖ-ದುಃಖಗಳನ್ನು ಸಮನಾಗಿಯೇ ಎದುರಿಸಬಲ್ಲ ಧೈರ್ಯ, ಜನಹಿತಕ್ಕಾಗಿಯೇ ಸಂಪೂರ್ಣ ಆಯುಷ್ಯವನ್ನು ಸವಿಸುವ ಸ್ವಭಾವ, ಗತಿಸಿಹೋದ ವಿಷಯದಲ್ಲಿ ಶೋಕವನ್ನು ಮಾಡದೆ ಭವಿಷ್ಯವನ್ನು ಚಿಂತಿಸದೆ ಪ್ರಕೃತ ನಡೆಯುತ್ತಿರುವ ಕಾರ್ಯಗಳಲ್ಲಿ ಪ್ರವೃತ್ತಿಸುವ ಹಾಗೂ ಸ್ಥಿರವಾದ ಸತ್ಯ ಧರ್ಮದಿಂದ ನಡೆಯುವ ಈ ಮೊದಲಾದ ಉದಾತ್ತವಾದ ಲಕ್ಷಣಗಳುಳ್ಳವರೆ ಮಹಾತ್ಮರು.





# ವ್ಯಕ್ತಿ ಮತ್ತು ಸಮಾಜ

—ಕೆ. ಶಾರದಾರಾಜಶೇಖರ್
847, 4 ನೇ ಮುಖ್ಯರಸ್ತೆ, ವಿಜಯನಗರ, ಬೆಂಗಳೂರು-40

ವ್ಯಕ್ತಿಗೂ ಮತ್ತು ಸಮಾಜಕ್ಕೂ ತುಂಬಾ ನಿಕಟವಾದ ಸಂಬಂಧವಿದೆ, ವ್ಯಕ್ತಿ ದೊಡ್ಡವನಾಗದ ಹೊರತು ಸಮಾಜ ದೊಡ್ಡದಾಗಲಾರದು, ಸಾಮಾಜಿಕ ಮೌಲ್ಯಗಳು ವೈಯಕ್ತಿಕ ಮೌಲ್ಯಗಳ ಸಾಧನೆಯಿಂದ ಮಾತ್ರ ರೂಪುಗೊಳ್ಳಬಲ್ಲವು, ಸಮಾಜವಾದದ ಎಲ್ಲ ತತ್ವಗಳನ್ನು ಘೋಷಿಸುತ್ತೇವೆ. ಸಾಮೂಹಿಕ ಮೌಲ್ಯಗಳನ್ನು ಉತ್ಸಾಹದಿಂದ ಹೇಳುತ್ತೇವೆ ಆದರೆ ವೈಯಕ್ತಿಕವಾಗಿ ಅವುಗಳನ್ನು ಹೆಜ್ಜೆ ಹೆಜ್ಜೆಗೂ ಬಲಿಕೊಡುತ್ತಿದ್ದೇವೆ, ಉತ್ತಮ ಮೌಲ್ಯಗಳನ್ನು ನಿಷ್ಠೆಯಿಂದ ಆಚರಿಸುವ ವ್ಯಕ್ತಿ ಬದುಕಲಾರದಂತಹ ಪರಿಸ್ಥಿತಿ ಸಮಾಜದಲ್ಲಿ ನಿರ್ಮಾಣಗೊಂಡಿದೆ, ಒಳ್ಳೆಯತನವೆನ್ನುವುದು ಇಂದು ದಡ್ಡತನಕ್ಕೆ ಮತ್ತೊಂದು ಹೆಸರಾಗಿದೆ ಎಂದರೆ ತಪ್ಪಾಗಲಾರದು.

ನಾವು ಯಾವ ವಿಷಯವನ್ನೇ ಆಗಲಿ ಆಳವಾಗಿ ಚಿಂತನೆ ಮಾಡಲಿಚ್ಛಿಸುವುದಿಲ್ಲ, ನಮ್ಮ ಮೆದುಳಿಗೆ, ಮನಕ್ಕೆ ಹೆಚ್ಚು ಕಷ್ಟವಾದೀತೆಂಬ ಭಯ, ನಮ್ಮ ಕಾರ್ಯಕ್ರಮಗಳು ಎಲ್ಲಿ ವ್ಯತ್ಯಾಸಗೊಳ್ಳುವುದೋ ಎಂಬ ಭೀತಿ, ಯೋಚನೆ ಮಾಡದೆ, ವಿಚಾರಶೀಲರಾಗದೆ ಬೇರೆಯವರು ಮಾಡಿದುದನ್ನೇ ಅವರುಗಳು ಮಾಡುವ ರೀತಿಯಲ್ಲೇ ನಾವು ಮಾಡಿಬಿಡುತ್ತೇವೆ. ಆಲೋಚನೆ ಮಾಡದೆ ನಮ್ಮ ವಿನಾಶಕ್ಕೆ ನಾವೇ ಮುನ್ನುಗ್ಗುತ್ತಿದ್ದೇವೆ, ನಮ್ಮ ಮನಸ್ಸೇ ನನ್ನದಲ್ಲವಾಗಿದೆ. ನಮಗಿಂತ ಹೆಚ್ಚು ಬಲಯುತವಾಗಿರುವ ಯಂತ್ರಗಳು ನಮ್ಮನ್ನು ವಶಪಡಿಸಿಕೊಂಡಿವೆ. ವಿಷಯಗಳನ್ನು ನೇರವಾಗಿ ನೋಡುವ ಸಾಮರ್ಥ್ಯನಮಗಿಲ್ಲವಾಗಿದೆ, ಸಮಾಜದಲ್ಲಿ ದ್ವೇಶದ ಭಾವನೆಗಳನು ಉದ್ದೀಪನಗೊಳಿಸುವಲ್ಲಿ ಅನೇಕ ರಾಜಕೀಯ ಪಕ್ಷಗಳು ಯಶಸ್ವಿಯಾಗಿ ತಮ್ಮ ಬೆಳೆಯನ್ನು ಬೇಯಿಸಿಕೊಳ್ಳುತ್ತಿವೆ. ಕೊಲ್ಲಲು ಹಿಂಜರಿಯದಷ್ಟು ದ್ವೇಷ ಮಾಡದಿದ್ದರೆ ಅಂತಹವರನ್ನು ಅಂಜುಬುರುಕರೆಂದು. ಹೇಡಿಗಳೆಂದು ಮೂದಲಿಸುತ್ತಾರೆ.

ಯುದ್ಧದ ಆಕರ್ಷಣೆ, ವೀರ್ಯ, ಬಲಿದಾನ ಇವೆಲ್ಲವನ್ನೂ ಜನತೆಯ ಮುಂದೆ ಪದಕ, ಬಹುಮಾನ ಸನ್ಮಾನಗಳ ಮೂಲಕ ಓಲಾಡಿಸುತ್ತೇವೆ ಜಗತ್ತನ್ನು ಪ್ರಜಾ

ಪ್ರಭುತ್ವಕ್ಕೆ ಸುಭದ್ರವನ್ನಾಗಿ ಮಾಡುತ್ತೇವೆ, ಮನೆ ಮಠಗಳನ್ನು ಕಾಪಾಡುತ್ತೇವೆ, ಹೆಂಗಸರು ಮಕ್ಕಳನ್ನು ರಕ್ಷಣೆ ಮಾಡುತ್ತೇವೆ, ಶಾಂತಿಯ ಒಪ್ಪಂದಗಳನ್ನು ಎತ್ತಿ ಹಿಡಿಯುತ್ತೇವೆ ಎಂದು ಮುಂತಾಗಿ ಶ್ಲಾಘನೀಯವಾದ ಕಾರಣಗಳನ್ನು ಕೊಟ್ಟು ಮನುಷ್ಯ ಯುದ್ಧವನ್ನು ಸಮರ್ಥಿಸುತ್ತಾನೆ,

ಪರರು ನಮ್ಮ ಮೇಲೆ ಆಕ್ರಮಣ ಮಾಡಿದಾಗ, ನಮ್ಮನ್ನು ನಾವು ರಕ್ಷಿಸಿಕೊಳ್ಳಲು, ನಮ್ಮ ಸ್ವಾತಂತ್ರ್ಯವನ್ನು ಉಳಿಸಿಕೊಳ್ಳಲು ಯುದ್ಧ ಮಾಡಬೇಕಾದುದು ಅನಿವಾರ್ಯವೇ ಹೊರತು, ವಿಸ್ತಾರಣ ಹಣದಾಸೆ, ಅಧಿಕಾರದ ಬಯಕೆ, ಭೂಮಿಯದಾಹ, ದ್ವೇಷ ಅಸೂಯೆಯಿಂದಾಗಿ ಯುದ್ಧ ಮಾಡುವುದು ಸಲ್ಲದು, ಯುದ್ಧ ಮುಖ್ಯವಾಗಿ ಪಾಶವೀಕ್ರಿಯೆ ಮಾನವೀಯತೆಯ ಸಂಸ್ಕೃತಿಯ ಮತ್ತು ಮೌಲ್ಯಗಳ ಪರಿತ್ಯಾಗ ಎನ್ನುವುದನ್ನು ನಾವು ಅರಿತುಕೊಳ್ಳಬೇಕು, ಯುದ್ಧ ತಪ್ಪುಮಾತ್ರವಲ್ಲ ಅಪರಾಧ, ಈಗ ಹಿಂದಿನ ಬಂದೂಕುಗಳ ಬದಲು ಅಟಂ ಬಾಂಬ್‌ಗಳನ್ನು ಬಳಸುತ್ತೇವೆ, ಇದರಿಂದ ವಿನಾಶ ಸಾರ್ವತ್ರಿಕವಾಗುತ್ತದೆ, ಇದರಲ್ಲಿ ಯುದ್ಧಮಾಡುವವರು ಯುದ್ಧ ಮಾಡದೇ ಇರುವವರು ಮಕ್ಕಳು ಹೆಂಗಸರು ಎಂಬ ಭೇದ ಇರುವುದಿಲ್ಲ, ಮಾನವ ಕೋಟಿಯ ಬಹುಪಾಲು ದುಃಖ ಮಾನವನ ಕೆಟ್ಟತನದಿಂದಲ್ಲ ತಿಳಿಗೇಡಿತನದಿಂದ ಉಂಟಾದುದು, ಯುದ್ಧದಿಂದ ಶಾಂತಿಗೆ ಪೂರ್ತಭಂಗ ಉಂಟಾಗುತ್ತದೆ ಶಾಂತಿ ಎನ್ನುವುದುಕೊಳ್ಳಬಹುದಾದವಸ್ತುವಲ್ಲ, ಶಾಂತಿ ದೇಶದಲ್ಲಿ ನೆಲಸಬೇಕಾದರೆ ಮಾನವಕೋಟಿಯ ನೈತಿಕ ಔದಾಸೀನ್ಯ ಹರಿಯಬೇಕು ಜನಸಂಗಳಿಯ ದಬ್ಬಾಳಿಕೆಯನ್ನು ಎದುರಿಸುವ ಸಾಮರ್ಥ್ಯ ಪಡೆದುಕೊಳ್ಳಬೇಕು, ನಮ್ಮಲ್ಲಿ ಒಬ್ಬೊಬ್ಬರೂ ಮಾನವ ಕೋಟಿಯ ಸುಖ ಸಂತೋಷಗಳಿಗೆ ಹೊಣೆಗಾರರು, ಈ ಹೊಣೆಗಾರಿಕೆಯ ವಿಸ್ತಾರವನ್ನು ಉತ್ಪ್ರೇಕ್ಷಿಸುವುದು ಸಾಧ್ಯವಿಲ್ಲ ಮಾನವ ಇನ್ನೊಬ್ಬ ಮಾನವನ ದೋಷವನ್ನು ಸಹಿಸಿಕೊಳ್ಳಬೇಕು. ಕಷ್ಟ ಒದಗಿದಾಗ ಪರಸ್ಪರ ನೆರವು ನೀಡಬೇಕು, ಜನರ ವ್ಯಕ್ತಿತ್ವದ ಸಾತ್ವಿಕ ಸ್ವರೂಪವೇ ಮಾನವ ಕುಲದ ಕಲ್ಯಾಣಕ್ಕೆ ಶ್ರೀರಕ್ಷೆ, ಕರ್ಷಕ ಸ್ವರೂಪವನ್ನು ಮುಟ್ಟಿರುವ ಹಿಂಸಾಪ್ರವೃತ್ತಿಗೆ ತಡೆಯೊಡ್ಡಲು ಅದೊಂದೇ ದಿವ್ಯಾಸ್ತ್ರ

ವಿಜ್ಞಾನದ ದೈತ್ಯ ಶಕ್ತಿಯನ್ನು ಮಾನವನ ನಾಶಕ್ಕೆ ಬಳಸದೇ ಅವನ ಕಲ್ಯಾಣಕ್ಕೆ ಮಾತ್ರ ವಿನಿಯೋಗಿಸುವಂತಾಗಬೇಕು, ಪ್ರಾಜ್ಞರು ಯುದ್ಧವನ್ನು ಅನೇಕ ದೃಷ್ಟಿಕೋನಗಳಿಂದ ಕಂಡು ಅದನ್ನು ಖಂಡಿಸಿದ್ದಾರೆ, ದ್ವೇಷ ನಮ್ಮನ್ನೂ ನಾವು ದ್ವೇಷಿಸುವವರನ್ನೂ ದಹಿಸುತ್ತದೆ, ಆರ್ಥಿಕ ದೃಷ್ಟಿಕೋನಗಳಿಂದಲೂ ಯುದ್ಧವು ಖಂಡನೆಗೆ ಅರ್ಹವಾಗಿದೆ, ಆಧುನಿಕ ಯುದ್ಧದಿಂದ ಲಕ್ಷಾಂತರ ಪ್ರಜೆಗಳು ಮಡಿಯುವುದಲ್ಲದೆ ದೇಶದ ಆರ್ಥಿಕ ಸಂಪತ್ತು ಅತ್ಯಧಿಕ ಪ್ರಮಾಣದಲ್ಲಿ ವ್ಯರ್ಥವಾಗುವುದು, ಸರ್ಕಾ-



ರಗಳು ಯುದ್ಧಕ್ಕೋಸ್ಕರ ವೆಚ್ಚ ಮಾಡುತ್ತಿರುವ ಅಪಾರವಾದ ಹಣದ ಸಹಾಯದಿಂದ ಬಡತನ ನಿರುದ್ಯೋಗ ನಿರಕ್ಷರತೆ, ರೋಗರುಜಿನಗಳೇ ಮೊದಲಾದ ಶಾಂತಿ ಕಾಲದ ಶತ್ರುಗಳನ್ನು ನಿರ್ಮೂಲ ಮಾಡಿ ಪ್ರಜಾಸೌಖ್ಯವನ್ನು ಅಭಿವೃದ್ಧಿಗೊಳಿಸಬಹುದು. ಆದ್ದರಿಂದ ಯುದ್ಧಗಳು ತಪ್ಪಿ ಚಿರಕಾಲವೂ ವಿಶ್ವಶಾಂತಿ ಏರ್ಪಡುವಂತೆ ಪ್ರತಿಯೊಂದು ದೇಶದ ಸರ್ಕಾರವೂ ಪ್ರತಿಯೊಬ್ಬ ವ್ಯಕ್ತಿಯೂ ಯುದ್ಧವನ್ನು ದ್ವೇಷಿಸುವಂತಾಗಬೇಕು. ಕೆಲವು ಜನಗಳ ದುರಾಸೆಯ ಫಲವಾಗಿ ಲಕ್ಷಾಂತರ ಜನ ಮಡಿಯುವುದನ್ನು ನಿಲ್ಲಿಸಬೇಕು. ಎಲ್ಲ ರಾಷ್ಟ್ರಗಳು ಮತ್ತು ಜನತೆ ಇದರ ಬಗ್ಗೆ ಚಿಂತನೆ ಹರಿಸಿ ಜನರನ್ನು ಜಾಗೃತಗೊಳಿಸಬೇಕು.

ಶರಣರ ಮುಂದಿದ್ದುದು ವ್ಯಕ್ತಿತ್ವದ ವಿಕಾಸದ ಪೂರ್ಣ ದೃಷ್ಟಿ ಮತ್ತು ಸ್ವಯಂ ಪೂರ್ಣ ಸಮಾಜದ ಸಮಗ್ರ ಕಲ್ಪನೆ. ●

---

# 'ಶಿವಾಚಾರ ನಗರ್ತ ಪುರಾಣ'

—ಡಾ|| ಸಿ. ಅಶ್ವತ್ಥ್
ನಂ. 15 18 ನೇ ಅಡ್ಡರಸ್ತೆ ಕೆ. ಎಂ. ನಾಗಣ್ಣ ರಸ್ತೆ. ಬೆಂಗಳೂರು-560002

ವರಕುಮಾರನ ಶಿರವನರಿದು ಹರನಿಗುಣಲಿಟ್ಟು, ಭಕ್ತಾಗ್ರೇಸರ ನೆನಿಸಿ, ಕಾಂಚೀಪುರವನ್ನು ಕೈಲಾಸ ಕೊಯ್ದು, ಭಕ್ತಸಿರಿಯಾಳನ ವಂಶಸ್ಥರೂ, ಕುಬೇರ ಕುಲ ವೈಶ್ಯರೂ, ಧನಕನಕ ವಸ್ತು ವಾಹನ ವೈಭವಗಳಿಂದ ಮೆರೆದವರೂ, ದಾನ ದಾಸೋಹಗಳಲ್ಲಿ ಅದ್ವಿತೀಯರೆನಿಸಿಕೊಂಡವರೂ ಆದ ಶಿವಾಚಾರ ನಗರ್ತರ ಪುರಾಣವು ಕೇವಲ ಕತೆಯಲ್ಲ, ಕುತೂಹಲ ಭರಿತವಾದ, ಇತಿಹಾಸ ಪ್ರಸಿದ್ಧವಾದ ಕುಲವೆನ್ನಬಹುದು.

ಪುರಾಣೇತಿಹಾಸಗಳ ಚಿಪ್ಪನ್ನು ಭೇದಿಸಿ ನೋಡಿದಾಗ ಅನೇಕ ಅಮೂಲ್ಯ ರತ್ನಗಳು ಕಾಣಿಸುತ್ತವೆ. ಅವುಗಳ ಪ್ರಕಾರ ಭೂಮಂಡಲದಲ್ಲಿ ವ್ಯಾಪಾರ, ವ್ಯವಹಾರಗಳನ್ನು ನಿರ್ವಹಿಸುವ ಸಾಮರ್ಥ್ಯವುಳ್ಳ ಜನಾಂಗದ ಅವಶ್ಯಕತೆಯನ್ನು ದೇವತೆಗಳು ದೇವಸಭೆಯಲ್ಲಿ ವಿನಂತಿಸಿಕೊಳ್ಳುತ್ತಾರೆಂದು ತಿಳಿದು ಬರುತ್ತದೆ. ದೇವತೆಗಳ ಮೊರೆಯನ್ನು ಆಲಿಸಿದ ಬ್ರಹ್ಮನು, ಈ ಮಹತ್ಕಾರ್ಯವನ್ನು ವಲ್ಕಲ ಮುನಿಗಳಿಗೆ ವಹಿಸುತ್ತಾನೆ ಯಜ್ಞ ಯಾಗಾದಿಗಳನ್ನು ಮಾಡಿದ ನಂತರ ವಲ್ಕಲ ಮಹಾ ಮುನಿಗಳು "ಕುಶ" ಗರಿಕೆಯಿಂದ ಒಂದು ಸಹಸ್ರ ಋಷಿ (ಮೂರ್ತಿ) ಗಳನ್ನು ತಯಾರಿಸುತ್ತಾರೆ. ನಂತರ ತಮ್ಮ ತಪಃ ಶಕ್ತಿಯಿಂದ ಆ ಮೂರ್ತಿಗಳಿಗೆ ಜೀವ ತುಂಬುತ್ತಾರೆ. ಜೀವಂತ ಮೂರ್ತಿಗಳಿಗೆ ಬಂದ ವರ್ಚಸ್ಸನ್ನು ಕಂಡು ಮನಸೋತ ಕುಬೇರನು ತನ್ನ ಸಹಸ್ರ ಹೆಣ್ಣು ಮಕ್ಕಳನ್ನು ಇವರಿಗೆ ಧಾರೆ ಎರೆದು ಕೊಡುತ್ತಾನೆ. ದೈವಾನುಗ್ರಹ ಹಾಗೂ ಮುನಿವರ್ಯರುಗಳ ಕೃಪಾಶೀರ್ವಾದಗಳಿಂದ ಸಹಸ್ರದಂಪತಿಗಳು ವ್ಯಾಪಾರ ವ್ಯವಹಾರಗಳ ಸೂತ್ರ ಹಿಡಿಯಲು ಧರೆಗಿಳಿಯುತ್ತಾರೆ ಈ ಸಹಸ್ರ ಋಷಿಗಳ ಪೀಳಿಗೆಯೇ ಇಂದಿನ ವೈಶ್ಯ ಜನಾಂಗ ಇಂದಿಗೂ ವೈಶ್ಯರಲ್ಲಿ ಸಹಸ್ರ ಗೋತ್ರಗಳಿವೆ. ಆದುದರಿಂದಲೇ ಅವರನ್ನು ಸಹಸ್ರಋಷಿ ಗೋತ್ರದವರೆಂದು ಕರೆಯಲ್ಪಡುವುದು.

ವೈಶ್ಯರಲ್ಲಿ ಒಡಕುಂಟಾದಾಗ ಒಂದು ಗುಂಪು ಚದುರಿ ಹೋಯಿತು. ಮತ್ತೊಂದು ಗುಂಪು ಅಯೋಧ್ಯಾ ನಗರದಲ್ಲಿ ನೆಲೆಸಿತು. ನಗರದಲ್ಲಿದ್ದುದರಿಂದ "ನಗರದವರು" ಎಂದು ಹೇಳಿ ಕೊಳ್ಳುತ್ತಿದ್ದರು. ಅದು ಕ್ರಮೇಣ 'ನಗರ್ತರು' ಎಂದು ಪರಿವರ್ತಿತವಾಯಿತು. ನಗರ್ತರಲ್ಲಿ 'ಶೈವರು' ಅಥವಾ 'ಶಿವಾಚಾರ ನಗರ್ತರು'



ಮತ್ತು 'ವೈಷ್ಣವರು' ಅಥವಾ 'ನಾಮಧಾರಿ ನಗರ್ತರು' ಎಂಬ ಎರಡು ಪಂಗಡಗಳುಂಟು. ಇವೆರಡು ಗುಂಪುಗಳ ಜನಸಂಖ್ಯೆ ಕ್ರಿ. ಶ 1901 ರಲ್ಲಿ ಕರ್ನಾಟಕದಲ್ಲಿ 9318. ಅದರಲ್ಲಿ 4542 ಜನ ಗಂಡಸರೆಂದು ಜನಗಣತಿಯ ದಾಖಲೆಗಳು ತಿಳಿಸುತ್ತವೆ. ಇವರಲ್ಲಿ ಬಹಳ ಜನರು ಬೆಂಗಳೂರು ಮತ್ತು ಕೋಲಾರ ಜಿಲ್ಲೆಗಳಲ್ಲಿ ವಾಸಿಸುವರೆಂದು ಮಾಹಿತಿಗಳಿಂದ ದೊರೆತ ವಿಷಯವಾಗಿದೆ ತಮಿಳುನಾಡು, ಆಂಧ್ರ..........ಮುಂತಾದ ಕಡೆಗಳಲ್ಲಿ ಹಾಗೂ ಅಯೋಧ್ಯೆಯ ಸುತ್ತ ಮುತ್ತ ಇರಬಹುದಾದ ಜನರ ಬಗ್ಗೆ ವಿವರಗಳು ದೊರೆಯದಿರುವುದು ವಿಷಾದಕರವೆನ್ನಬಹುದು.

ಶಿವಭಕ್ತ ಶಿರೋಮಣಿಗಳಾದ ಅರವತ್ತಮೂರು ಪುರಾತನರಲ್ಲಿ ಭಕ್ತಸಿರಿಯಾಳರೂ ಒಬ್ಬರು. ಶಿವಾಚಾರ ವೈಶ್ಯಕುಲಕ್ಕೆ ಕೀರ್ತಿ ಕಲಶವಾದ ಸಿರಿಯಾಳನ ದಾಸೋಹ ಭಕ್ತಿ, ತ್ಯಾಗಗಳನ್ನು ಜಗಜ್ಯೋತಿ ಬಸವೇಶ್ವರರು ತಮ್ಮ ವಚನಗಳಲ್ಲಿ ಕೊಂಡಾಡಿದ್ದಾರೆ. ನಮ್ಮ ಹಿರಿಯರ ಬಾಯಿಂದ ಕೇಳಲ್ಪಡುತ್ತಿದ್ದ. ಧರಣಿಪಾಲಕರೆನಿಸಿದ್ದ ಧನಪಾಲ, ಧರ್ಮಪಾಲರೆಂಬುವರ ಬಗ್ಗೆ ಹೆಚ್ಚಿನ ಮಾಹಿತಿಗಳು ಸಿಗದಿರುವುದು ಕುಲಜರ ದುರ್ದೈವವೆಂದೇ ಹೇಳಬಹುದು.

ಶಿವಾಚಾರ ನಗರ್ತರ ಆರಾಧ್ಯ ದೈವ ಶ್ರೀ ವೀರಭದ್ರ ಸ್ವಾಮಿಯವರು, ಶ್ರೀ ಬಸವಣ್ಣನವರು, ಶ್ರೀ ಮಣ್ಣೇಶ್ವರ ಸ್ವಾಮಿಯವರು...... ಮುಂತಾದವರುಗಳಾಗಿದ್ದರೂ ಸಹ ಕುಲದೈವ "ಶ್ರೀ ನಗರೇಶ್ವರ ಸ್ವಾಮಿಯವರು"

ಸುಮಾರು ಒಂದು ನೂರು ವರ್ಷಗಳ ಹಿಂದೆ ಬೆಂಗಳೂರಿನ ಏಕೈಕ ರಸ್ತೆ ಹಾಗೂ ರಾಜ ಬೀದಿಯಾಗಿದ್ದ 'ನಗರ್ತರ ಪೇಟೆ' ಯ ಇಕ್ಕೆಲಗಳಲ್ಲೂ ನಗರ್ತರು ವಾಸಿಸುತ್ತಿದ್ದು ಆ ಕಾಲಕ್ಕೆ ಉಪ್ಪರಿಗೆ (ಮಹಡಿ) ಮನೆ ಕಟ್ಟಿಸಿಕೊಂಡು ವೈಭವದ ಜೀವನ ಸಾಗಿಸುತ್ತಿದ್ದರೆಂದು ದಾಖಲೆಗಳು ತಿಳಿಸುತ್ತವೆ.

ಬೆಂಗಳೂರು ನಗರ್ತರ ಪೇಟೆಯಲ್ಲಿರುವ ಶ್ರೀ ನಗರೇಶ್ವರ ಸ್ವಾಮಿ ದೇವಾಲಯದ ಶತಮಾನೋತ್ಸವವನ್ನು ಇತ್ತೀಚೆಗಷ್ಟೇ ಆಚರಿಸಲಾಯಿತು. ಇದೇ ರೀತಿ ಬೆಂಗಳೂರು ಮತ್ತು ಕೋಲಾರ ಜಿಲ್ಲೆಯ ಅನೇಕ ಸ್ಥಳಗಳಲ್ಲಿ ಶ್ರೀ ನಗರೇಶ್ವರ ಸ್ವಾಮಿ ದೇವಾಲಯಗಳಿವೆ. ಇತ್ತೀಚಿನ ಸಂಶೋಧನೆಗಳಿಂದ ಹಂಪೆಯ ಬಳಿಯಲ್ಲಿ ಶ್ರೀ ನಗರೇಶ್ವರನ ಸ್ವಾಮಿ ದೇವಾಲಯದ ಭಾಗಗಳು ಸಿಕ್ಕಿರುವುದಾಗಿ ತಿಳಿದು ಬಂದಿದೆ.

ಬೆಂಗಳೂರು ಸಿಟಿ ನಗರ್ತರ ಪೇಟೆಯಲ್ಲಿರುವ ಶ್ರೀ ಎಸ್. ಆರ್. ಎಸ್. ಜಿ ಸಂಪನ್ನಪ್ಪನವರ ವಿದ್ಯಾರ್ಥಿ ನಿಲಯ ಮತ್ತು ಚಾಮರಾಜ ಪೇಟೆಯಲ್ಲಿರುವ ಶ್ರೀ ಬಿ.ಕೆ. ಮರಿಯಪ್ಪನವರ ವಿದ್ಯಾರ್ಥಿ ನಿಲಯಗಳ ಸಂಸ್ಥಾಪಕರು ಶಿವಾಚಾರ ನಗರ್ತರಾದರೂ

ಸಹ ಆ ವಿದ್ಯಾರ್ಥಿ ನಿಲಯಗಳನ್ನು ಕೇವಲ ತಮ್ಮ ಕೋಮಿನವರಿಗೆ ಮಾತ್ರವೇ ಎಂದು ಸೀಮಿತಗೊಳಿಸದೆ ಸಾರ್ವಜನಿಕ ಉಚಿತ ವಿದ್ಯಾರ್ಥಿನಿಲಯಗಳೆಂದು ಬಯಸಿ (ವಿಲ್ ಮಾಡಿ) ಸೇವೆಯ ಕೀರ್ತಿ ಕಲಶಗಳಾಗಿದ್ದಾರೆ. ಆ ವಿದ್ಯಾರ್ಥಿ ನಿಲಯಗಳೆರಡೂ ಸಹ ಇಂದು ಸಹಸ್ರಾರು ಜನರಿಗೆ ಉಚಿತ ಪ್ರಸಾದ ನಿಲಯ ಹಾಗೂ ವಿದ್ಯಾದಾನದ ಶಿವಾಲಯಗಳಾಗಿವೆ. ಇದೇ ಮಾರ್ಗದರ್ಶನದಲ್ಲಿ ಎಲ್ಲ ಕೋಮಿನ ಉಚಿತ ವಿದ್ಯಾರ್ಥಿ ನಿಲಯಗಳೂ ಸಾರ್ವಜನಿಕರಿಗೆ ಪ್ರವೇಶ ದೊರಕಿಸಿ ಕೊಟ್ಟು ಬಸವಣ್ಣನವರು ಉಪದೇಶಿಸಿದ ಜಾತ್ಯಾತೀತ ರಾಷ್ಟ್ರ ನಿರ್ಮಾಣಕ್ಕೆ ನಾಂದಿಯಾಗಲಿ

---

ಪುರಾಣ ಮುನಿಗಳು-೧೦

# ಚ್ಯವನ

(ಮುಂದುವರಿದ ಲೇಖನ)

—ವೆ. ರಾಮಕೃಷ್ಣ ಶಾಸ್ತ್ರಿ.
ಶಿವಶಕ್ತಿ ನಿಲಯ, ಮಚ್ಚಿನ-574295, ಮಡಂತ್ಯಾರ್ ದಕ್ಷಿಣ ಕನ್ನಡ.

ಮಹರ್ಷಿ ಚ್ಯವನ ಭೃಗುವಿನ ಪುತ್ರ. ಅವನು ತಾಯಿ ಪುಲೋಮೆಯ ಗರ್ಭದಲ್ಲಿರುವಾಗ ಅವಳನ್ನು ಬಚ್ಚ ರಾಕ್ಷಸನು ಮೋಹಿಸಿ, ಹೊತ್ತುಕೊಂಡು ಓಡಲಾರಂಭಿಸಿದ ಆಗ ಭಯವಿಹ್ವಲಳಾದ ಪುಲೋಮೆಯ ಗರ್ಭವು ಸ್ರಾವವಾಗಿ ಹೊರಗೆ ಬಂದ ಮಗುವಿಗೆ ಚ್ಯವನನೆಂದು ಹೆಸರಾಯಿತು. ಆಕೂಡಲೆ ಶಿಶುವು ಕ್ರೂರದೃಷ್ಟಿಯಿಂದ ನೋಡಿದಾಗ ರಾಕ್ಷಸನು ಸುಟ್ಟು ಬೂದಿಯಾದನು.

ಘನ ವಿದ್ವಾಂಸನೂ ತಪೋನಿಷ್ಠನೂ ಆದ ಚ್ಯವನ ಮನುವಿನ ಪುತ್ರಿ ಅರುಷಿಯನ್ನು ಮದುವೆಯಾಗಿ ಔರ್ವನೆಂಬ ಮಗುವನ್ನು ಪಡೆದ. ವೃದ್ಧಾಪ್ಯದಿಂದ ಅಶಕ್ತನಾದ ಚ್ಯವನ ಕಾಡಿನಲ್ಲಿ ತಪೋನಿರತನಾದಾಗ ಅವನ ದೇಹದ ಸುತ್ತಲೂ ಹುತ್ತವು ಬೆಳೆಯಿತು ಅದರಿಂದ ದೇದೀಪ್ಯಮಾನವಾಗಿ ಬೆಳಗುವ ಎರಡು ಕಣ್ಣುಗಳು ಮಾತ್ರ ಕಾಣಿಸುತ್ತಿದ್ದವು ಒಂದು ದಿನ ಶರ್ಯಾತಿರಾಜನು ಬೇಟೆಗಾಗಿ ಸಕಲ ಸಭೆಯೊಂದಿಗೆ ಕಾಡಿಗೆ ಬಂದು, ಚ್ಯವನನು ತಪೋನಿರತನಾಗಿರುವ ಸ್ಥಳಕ್ಕೆ ಸನಿಹದಲ್ಲೇ ಬಿಡಾರ ಹೂಡಿದ್ದ.

ಶರ್ಯಾತಿಯ ಮಗಳು ಸುಕನ್ಯೆ ಸಖಿಯರೊಂದಿಗೆ ಆಲೆದಾಡುತ್ತ ಚ್ಯವನನಿರುವಲ್ಲಿಗೆ ಬಂದು, ಹುತ್ತದಲ್ಲಿ ಮಿನುಗುತ್ತಿದ್ದ ಕಣ್ಣುಗಳನ್ನು ಕಂಡು



ಕುತೂಹಲಗೊಂಡಳು. ನಿಜಸ್ಥಿತಿಯನ್ನು ಅರಿಯದೆ ಒಂದು ಮುಳ್ಳಿನ ಮೊನೆಯಿಂದ ಅವುಗಳನ್ನು ಚುಚ್ಚಿದಳು. ಅದರಿಂದಾಗಿ ಶರ್ಯಾತಿಗೂ ಆವನ ಪರಿವಾರದವರಿಗೂ ಪರಿಸ್ಥಿತಿ ವಿಪರೀತಕ್ಕಿಟ್ಟುಕೊಂಡಿತು. ಮಲಮೂತ್ರ ವಿಸರ್ಜನೆಯಾಗದೆ ಹೊಟ್ಟೆ ಉಬ್ಬಿಸಿಕೊಂಡು ಅವರು ನರಳಲಾರಂಭಿಸಿದರು. ಇದಕ್ಕೆ ಏನು ಕಾರಣವೆಂದು ರಾಜನು ವಿಚಾರಿಸಿದಾಗ ಸುಕನ್ಯೆಯು ಚ್ಯವನ ಋಷಿಗೆ ಎಸಗಿದ ಅಪಚಾರದ ವಿಚಾರವು ಗೊತ್ತಾಯಿತು. ಕೂಡಲೇ ಅವನು ಚ್ಯವನನ ಬಳಿಗೆ ಹೋಗಿ, ತನ್ನ ಮಗಳಿಂದಾದ ಅಪಚಾರವನ್ನು ಮನ್ನಿಸಬೇಕೆಂದು ಪ್ರಾರ್ಥಿಸಿದ.

ಅದಕ್ಕೆ ಚ್ಯವನನು, "ನಿನ್ನ ಮಗಳು ನನ್ನ ಕಣ್ಣುಗಳೆರಡನ್ನು ಚುಚ್ಚಿ ಕುರುಡಾಗಿಸಿದ್ದಾಳೆ. ಅವಳು ನನಗೆ ಹೆಂಡತಿಯಾಗಿ ನನ್ನ ಶುಶ್ರೂಷೆ ಮಾಡಿಕೊಂಡಿರುವುದಾದರೆ ನಾನು ನಿನ್ನನ್ನು ಕ್ಷಮಿಸಿ ಪರಿಸ್ಥಿತಿ ಸುಧಾರಿಸುವಂತೆ ಮಾಡುತ್ತೇನೆ" ಎಂದನು.

ಮುದುಕನೂ ಆದ ಚ್ಯವನನಿಗೆ ಸುಕುಮಾರಿಯಾದ ಮಗಳನ್ನು ಮದುವೆ ಮಾಡಿಕೊಡಲು ಶರ್ಯಾತಿ ಹಿಂತೆಗೆದ. ಆಗ ಸುಕನ್ಯೆಯೇ ಮುಂದೆ ಬಂದು, "ನನ್ನಿಂದಾಗಿ ಎಲ್ಲರಿಗೂ ತೊಂದರೆಯಾಗಬಾರದು. ನಾನು ಋಷಿವರ್ಯರ ಸತಿಯಾಗಿ ಅವರ ಸೇವೆಯನ್ನು ಕೈಗೊಳ್ಳುತ್ತೇನೆ" ಎಂದು ದೃಢನಿರ್ಧಾರದಿಂದ ಹೇಳಿದಳು.

ಅದರಂತೆ ಸುಕನ್ಯ ಚ್ಯವನನ ಸತಿಯಾಗಿ ಋಷಿಪತ್ನಿಯರಿಗೆ ತಕ್ಕಂದಾದ ನಾರು ಬಟ್ಟೆಗಳನ್ನು ಧರಿಸಿ ಅವನ ಸೇವೆ ಮಾಡಿಕೊಂಡಿದ್ದಳು. ಒಂದು ದಿನ ಆಕೆ ಸರೋವರದಲ್ಲಿ ಮಿಂದು ಒದ್ದೆ ಬಟ್ಟೆಯಲ್ಲಿ ಬರುತ್ತಿದ್ದಾಗ ದೇವತೆಗಳ ವೈದ್ಯರಾದ ಅಶ್ವಿನೀ ಕುಮಾರರು ಅವಳನ್ನು ನೋಡಿ ಮೋಹಪರವಶರಾದರು. ಅವರು ಅವಳ ಬಳಿಗೆ ತೆರಳಿ ಪ್ರಣಯಭಿಕ್ಷೆ ಬೇಡಿದಾಗ ಸುಕನ್ಯೆ ಕೋಪಗೊಂಡು ಶಪಿಸಲು ಮುಂದಾದಳು. ಅಶ್ವಿನೀಕುಮಾರರು ಅವಳ ಕಾಲುಗಳ ಮೇಲೆ ಬಿದ್ದು, "ಅಮ್ಮಾ, ನಮ್ಮನ್ನು ಕ್ಷಮಿಸು. ನಮಗೆ ಶಾಪ ಕೊಡಬೇಡ" ಎಂದು ನೀನು ಬೇಡಿದ ವರವನ್ನು ಕೊಡುತ್ತೇವೆ, ಬೇಡಿಕೊಂಡರು.

"ನಿಮ್ಮನ್ನು ಕ್ಷಮಿಸಬೇಕಾದರೆ ನನ್ನ ಪತಿಯು ಯೌವನ ಮತ್ತು ಕಣ್ಣುಗಳು ಮತ್ತೆ ಸಿಗುವಂತೆ ಮಾಡಿ" ಎಂದು ಸುಕನ್ಯ ಕೋರಿದಾಗ, ಅವರು, "ಹಾಗೆಯೇ ಆಗಲಿ. ನಾವು ನಿನ್ನ ಪತಿಯನ್ನು ಕರೆದುಕೊಂಡು ನೀರಿನಲ್ಲಿ ಮುಳುಗಿ ಹಾಕಿ ಮೇಲೆ ಬರುತ್ತೇವೆ. ಆಗ ಮೂವರೂ ರೂಪ, ಆಕಾರಗಳಲ್ಲಿ ಸ್ವಲ್ಪವೂ ವ್ಯತ್ಯಾಸವಿಲ್ಲದೆ ನವಯುವಕರಾಗಿ ಕಾಣಿಸುತ್ತೇವೆ ಇವರಲ್ಲಿ ನಿನ್ನ ನಿಜವಾದ ಪತಿಯನ್ನು ಆರಿಸಿಕೊಳ್ಳುವ ಹೊಣೆ ನಿನ್ನದೇ ಆಗಿದೆ" ಎಂದರು.

ಅದರಂತೆ ಅವರು ಮೂವರು ನವಯುವಕರಾಗಿ ಮೇಲೆ ಬಂದಾಗ ಸುಕನ್ಯೆಯು ತನ್ನ ಗಂಡನನ್ನು ತೋರಿಸಿಕೊಡುವಂತೆ ಸಾವಿತ್ರಿದೇವಿಯನ್ನು ಮನಸ್ಸಿನಲ್ಲೇ ಬೇಡಿಕೊಂಡಳು. ಅವಳ ಪಾತಿವ್ರತ್ಯಬಲದಿಂದ ಮಾನವನಾದ ಚ್ಯವನನ ಕಾಲುಗಳ ಮಾತ್ರ ನೆಲವನ್ನು ಸೋಕಿರುವುದೂ ಅವನಿಗೆ ಮಾತ್ರ ನೆರಳಿರುವುದೂ ಕಂಡುಬಂದು ಅವನನ್ನು ಗುರುತಿಸಿದಳು.

ಯೌವನವಂತನಾದ ಚ್ಯವನನು ಇದಕ್ಕೆ ಪ್ರತಿಯಾಗಿ ಅಶ್ವಿನೀ ಕುಮಾರರಿಗೆ
ಶರ್ಯಾತಿ ರಾಜನು ಮಾಡಿಸಿದ ಯಜ್ಞದಲ್ಲಿ ದೇವತೆಗಳಿಗೆ ಸರಿಸಮಾನವಾದ ಹವಿರ್ಭಾಗ
ವನ್ನು ಕೊಡಿಸಿದ. ದೇವತೆಗಳಲ್ಲಿ ಶೂದ್ರರಾದ ಅವರಿಗೆ ಅದುವರೆಗೆ ಹವಿಸ್ಸಿನಲ್ಲಿ
ಭಾಗವಿರಲಿಲ್ಲ. ಇದರಿಂದ ಇಂದ್ರನು ಕುಪಿತನಾಗಿ ಚ್ಯವನನ್ನು ಕೊಲ್ಲಲು ಹಲವು
ತಂತ್ರಗಳನ್ನುಮಾಡಿದ. ಚ್ಯವನನ ಮಂತ್ರಬಲದೆದುರು ಇಂದ್ರನ ಆಟ ನಡೆಯಲಿಲ್ಲ.
ಬದಲಾಗಿ ಚ್ಯವನನು ಸೃಷ್ಟಿಸಿದ ಒಂದು ಮಹಾಶಕ್ತಿ ಇಂದ್ರನನ್ನೇ ನುಂಗಲು ಬಂದಿತು.
ಬೇರೆ ದಾರಿಗಾಣದೆ ಇಂದ್ರನು ಚ್ಯವನನ ಮೊರೆಹೊಕ್ಕು ಅವನ ಕೃಪೆಯಿಂದ ಪಾತಾ
ಪಾರಾದ.

ಒಂದು ಸಲ ಚ್ಯವನ ನೀರಿನಲ್ಲಿ ಮುಳುಗಿ ತಪಸ್ಸು ಮಾಡುತ್ತಿದ್ದಾಗ ಬೆಸ್ತರು
ಬಲೆ ಬೀಸಿ, ಮೀನುಗಳೊಂದಿಗೆ ಬಲೆಯಲ್ಲಿ ಸಿಲುಕಿದ ಅವನನ್ನು ಹಿಡಿದು
ಮೇಲಕ್ಕೆಳೆದರು ಬಲೆಯಲ್ಲಿ ಋಷಿಯನ್ನು ಕಂಡು ತಮ್ಮಿಂದ ಅಪಚಾರ ವಾಯಿತೆಂದು
ಬೆಸ್ತರು ಮರುಗಿದಾಗ ಅವರೊಂದಿಗೆ, "ನನ್ನನ್ನು ಮೀನುಗಳಿಂದ ಬೇರ್ಪಡಿಸದೆ
ಮಾರಾಟ ಮಾಡಿ" ಎಂದನು.

ಆದರೆ ಋಷಿಯನ್ನು ಯಾರು ಕೊಳ್ಳುತ್ತಾರೆ? ತನ್ನನ್ನು ಕೊಳ್ಳುವವರಿಲ್ಲದೆ
ಬಲೆಯಿಂದ ಹೊರಗೆ ಬರಲು ಚ್ಯವನ ಒಪ್ಪಲಿಲ್ಲ. ಈ ಸುದ್ದಿ ತಿಳಿದು ನಹುಷ ರಾಜನು
ಅಲ್ಲಿಗೆ ಧಾವಿಸಿ ಬೆಸ್ತರೊಂದಿಗೆ, "ಈ ಋಷಿಯ ತೂಕದಷ್ಟು ಬಂಗಾರವನ್ನು ನಿಮಗೆ
ಕೊಡುತ್ತೇನೆ ಅವರನ್ನು ಬಿಟ್ಟುಬಿಡಿ" ಎಂದನು ಬೆಸ್ತರೇನೋ ಅದಕ್ಕೆ ಒಪ್ಪಿಕೊಂಡರು
ಆದರೆ ಚ್ಯವನನನ್ನು ತಕ್ಕಡಿಯಲ್ಲಿರಿಸಿ, ನಹುಷನ ರಾಜ್ಯದಲ್ಲಿರುವ ಬಂಗಾರವನ್ನೆಲ್ಲ
ಹಾಕಿದರೂ ತೂಕ ಸರಿದೂಗಲಿಲ್ಲ. ಮುಂದೇನು ಮಾಡುವುದೆಂದು ರಾಜನು
ಚಿಂತೆಗೊಳಗಾದ.

ಆಗ ಗವಿಜಾತನೆಂಬ ಮುನಿ ಅಲ್ಲಿಗೆ ಬಂದ, "ರಾಜಾ, ಬ್ರಾಹ್ಮಣನಿಗೆ ಸರಿಯಾದ
ಬೆಲೆ ಬಂಗಾರವಲ್ಲ ಅವನ ದೇಹಕ್ಕೆ ಸರಿಯಾದ ವಸ್ತುವೆಂದರೆ ಒಂದು ಆಕಳು"
ಎಂದನು. ಅದರಂತೆ ಬಂಗಾರದ ಬದಲು ಒಂದು ಹಸುವನ್ನಿರಿಸಿದಾಗ ಅದು ತೂಕಕ್ಕೆ
ಸರಿಹೊಂದಿತು. ಬೆಸ್ತರು ಅದನ್ನೇ ಚ್ಯವನನ ಬೆಲೆಯೆಂದು ಸ್ವೀಕರಿಸಿದರು.



ಚಂದ್ರವಂಶದ ಪುರು ರಾಜನ ಸಂತತಿಯಲ್ಲಿ ಜನಿಸಿದ ಕುಶಿಕರಾಜನ ವಂಶದೊಂದಿಗೆ ತನ್ನ ಭೃಗು ವಂಶವು ಬೆರೆಯುವುದೆಂಬ ವಿಚಾರ ಚ್ಯವನನಿಗೆ ಗೊತ್ತಾಯಿತು, ಅವನು ಅದನ್ನು ಸಹಿಸಲಿಲ್ಲ. ಯಾವ ರೀತಿಯಿಂದಾದರೂ ಕುಶಿಕನು ತಪ್ಪೆಸಗುವಂತೆ ಮಾಡಿ ಅದಕ್ಕಾಗಿ ಅವನ ವಂಶವೇ ನಿರ್ಮೂಲನ ವಾಗುವಂಥ ಶಾಪವನ್ನು ಕೊಡಬೇಕೆಂದು ಅವನು ನಿರ್ಧರಿಸಿದ. ಇದಕ್ಕಾಗಿ ಕುಶಿಕನ ಅರಮನೆಗೆ ಬಂದುಬಿಟ್ಟ.

ರಾಜದಂಪತಿಗಳು ಭಯಭಕ್ತಿಗಳಿಂದ ಚ್ಯವನನನ್ನು ಸತ್ಕರಿಸಿದರು. ಹಲವು
ದಿನಗಳಕಾಲ ಅವನು ಅಲ್ಲಿಯೇ ನಿಂತು ನಾನಾ ವಿಧದಿಂದ ಅವರನ್ನು ಪೀಡಿಸಿದ.
ತಾನು ಮಲಗಿರುವಾಗ ಅವರಿಂದ ಕಾಲೊತ್ತಿಸಿಕೊಂಡು. ದಂಪತಿಗಳಿಬ್ಬರು ರಥಕ್ಕೆ
ಕುದುರೆಗಳಂತೆ ಕಟ್ಟಿಸಿಕೊಂಡು ತನ್ನನ್ನು ಆ ರಥದಲ್ಲಿ ಕೂಡಿಸಿ ರಥವನ್ನೆಳೆಯುವಂತೆ
ಮಾಡಿದ. ಸಾಲದುದಕ್ಕೆ ಮುಳ್ಳು ಕೋಲುಗಳಿಂದ ಅವರನ್ನು ಚೆನ್ನಾಗಿ ಬಡಿದ.

ಆದರೂ ರಾಜದಂಪತಿಗಳು ಕುಟಿಪಿಟಕ್ಕೆನ್ನದೆ ಸಂತೋಷದಿಂದ ಚ್ಯವನನು
ಕೊಟ್ಟ ಪೀಡೆಗಳನ್ನೆಲ್ಲ ಸಹಿಸಿಕೊಂಡರು. ಅವರ ಸಹನೆಯನ್ನು ಚ್ಯವನನು
ಮೆಚ್ಚಿಕೊಂಡ "ನಿಮ್ಮ ಸೇವೆಗೆ ಮೆಚ್ಚಿದ್ದೇನೆ. ನಿಮ್ಮ ವಂಶದಲ್ಲಿ ಮುಂದೆ ಬ್ರಹ್ಮರ್ಷಿ
ಯಾಗಿ ಮೆರೆದು ಕೀರ್ತಿಶಾಲಿಯಾಗುವಂಥ ಮಹಾವ್ಯಕ್ತಿಯು ಜನಿಸುತ್ತಾನೆ.
ಅದರಿಂದ ಪ್ರಖ್ಯಾತಗೊಳ್ಳುವ ವಂಶ ನಿಮ್ಮದಾಗುತ್ತದೆ. (ಅದೇ ಪ್ರಕಾರ ಕುಶಿಕನ
ಮೊಮ್ಮಗನಾಗಿ ಜನಿಸಿದ ವಿಶ್ವರಥ ಮುಂದೆ ಶ್ರೇಷ್ಠನಾದ ವಿಶ್ವಾಮಿತ್ರನೆನಿಸಿದ.)
ತನ್ನ ಯೋಗಶಕ್ತಿಯಿಂದ ಪ್ರತಿಸ್ವರ್ಗವನ್ನು ಸೃಷ್ಟಿಸಿ, ರಾಜದಂಪತಿಗಳಿಗೆ ತೋರಿಸಿದ.
ಚ್ಯವನ ಋಷಿಯು ರಾಕ್ಷಸರ ಪುರೋಹಿತ ಶುಕ್ರಾಚಾರ್ಯನಿಗೆ ಸಹೋದರ.
ಅವನಿಗೆ ಸುಕನ್ಯೆಯಿಂದ ಜನಿಸಿದ ಮಗನೇ ಪ್ರಮತಿ.

## ಯುವ ಜನಾಂಗಕ್ಕೆ ಒಂದು ಸಂದೇಶ

ನಿವಾರಣೆಯಾಗದೆ ವಿವಾಹವು ಪವಿತ್ರ
ವರದಕ್ಷಿಣೆಯ ಪಿಡುಗು ವಿವಾಹ ಪವಿತ್ರ ಬಂಧನವೆನಿಸದೆ
ಬಂಧನವಾಗಲು ಸಾಧ್ಯವಿಲ್ಲ. ನೆಲೆಗೊಳ್ಳುವುದಿಲ್ಲ, ಕೌಟುಂಬಿಕ
ಕೌಟುಂಬಿಕ ಶಾಂತಿಸಾಮರಸ್ಯ ಸತ್ಪ್ರಜೆಗಳ ನಿರ್ಮಾಣವಾಗದು
ಸಾಮರಸ್ಯ ಸ್ಥಿರವಾಗದೆ ಕುಟುಂಬವು ಸಮಾಜದಲ್ಲಿ ಉನ್ನತಿ, ಶಾಂತಿ,
ಸತ್ಪ್ರಜೆಗಳ ನಿರ್ಮಾಣವಾಗದೆ ಈ ರೀತಿ ಒಂದಕ್ಕೊಂದು
ಸೌಹಾರ್ದತೆಗಳು ಉಂಟಾಗಲಾರವು.
ಹೊಂದಿಕೊಂಡಿವೆ.

# ಜಾನಪದ ಕವಿಗಳು ಕಂಡ ಶರಣರು

—ಎಂ. ಎ. ನೀಲಾಂಬಿಕಾ

೧೨ನೇ ಶತಮಾನದಲ್ಲಿ ಪ್ರಮುಖ ಪಾತ್ರವನ್ನು ವಹಿಸಿದ್ದ ಶಿವಶರಣರನ್ನು ಕುರಿತು ಮುಂದಿನ ಅನೇಕ ಕವಿಗಳು ಕೃತಿಗಳನ್ನು ರಚಿಸಿದ್ದಾರೆ. ಅಂತೆಯೇ ಶರಣರ ಕಾಯಕ ತತ್ವವನ್ನು ಅವರ ವ್ಯಕ್ತಿತ್ವವನ್ನು ಜನಪದಕವಿಗಳು ತಮ್ಮ ಸುಶ್ರಾವ್ಯ ಕಂಠದಿಂದ ಹಾಡಿ ಜನತೆಗೆ ತಿಳಿಸಿದ್ದಾರೆ.

ಜನಪದ ಸಾಹಿತ್ಯ ಸಾಗರೋಪಮವಾದುದು. ಸಾಗರದಲ್ಲಿ ಹೇಗೆ ಮುತ್ತು ರತ್ನಗಳು ಹುದುಗಿರುವವೋ ಅಂತೆಯೇ ಈ ಸಾಹಿತ್ಯದಲ್ಲಿ ಅನೇಕ ಘಟನೆಗಳೆಂಬ ಮುತ್ತು ರತ್ನಗಳು ಹುದುಗಿವೆ. ಈ ಸಾಹಿತ್ಯ ಪಂಡಿತರಿಂದ ಮೂಡಿಬಂದುದಲ್ಲ ಆದರೆ ಹಳ್ಳಿಯ ಪ್ರತಿಯೊಬ್ಬ ವ್ಯಕ್ತಿಯೂ ಕೆಲಸ ಮಾಡುವಾಗ ತನ್ನ ಬೇಸರವನ್ನು ಕಳೆಯಲು ಹಾಡನ್ನು ಹಾಡಿ ಆ ಮೂಲಕ ತಮ್ಮ ಅನುಭವವನ್ನೆಲ್ಲ ಸಾರವತ್ತಾಗಿ ಅಭಿವ್ಯಕ್ತಿಸಿದ್ದಾರೆ.

ಶರಣ ಸಂಸ್ಕೃತಿಯ ರೀತಿ ನೀತಿಗಳನ್ನು ಮೆಚ್ಚಿದ ಇವರು ಹೀಗೆ ಹಾಡಿದ್ದಾರೆ—

"ಹಂತಿ ಹೊಡೆಯುತ ನೆನವೆ ಸಂತಸದಿ ಶರಣರನು
ಕಂತು ಹರ ನಿನ್ನ ಭಕ್ತರನು। — ನೆನಸಿದರೆ
ಸಂತಸದಿ ನೀಡೋ ಹರ ಶಿವನೇ —

ಶಿವಶರಣರ ಅಗಾಧ ಚರಿತ್ರೆಗಳನ್ನು ತಿಳಿದ ಇವರು ಭಕ್ತಿಯಿಂದ ಶರಣರನ್ನು— ಬಸವಣ್ಣ, ಚೆನ್ನಬಸವಣ್ಣ, ಇಳಿಹಾಳ ಬೊಮ್ಮಯ್ಯ, ಪೂಕಾರ ಮಾದಯ್ಯ, ಕಿನ್ನರಿ ಬ್ರಹ್ಮಯ್ಯ, ಕಲಕೇತ ಬೊಮ್ಮಯ್ಯ, ಕೊಡಗೂಸು, ಮಾದಾರ ಚೆನ್ನಯ್ಯ ಇವರೇ ಮುಂತಾದವರನ್ನು— ಕುರಿತು ಹಾಡಿದ್ದಾರೆ. ಇಲ್ಲಿ ಜನಪದ ಕವಿಗಳು ಹೇಗೆ ಶರಣರ ವ್ಯಕ್ತಿತ್ವವನ್ನು ಅವರನ್ನು ನೆನೆಯುತ್ತ ಚಿತ್ರಿಸಿದ್ದಾರೆಂಬುದನ್ನು ತಿಳಿಸಲು ಯತ್ನಿಸುತ್ತಿದ್ದೇನೆ.

"ಎಲ್ಲ ಬಲ್ಲಿದನಯ್ಯ ಕಲ್ಯಾಣ ಬಸವಯ್ಯ
ಚೆಲ್ಲಿದನು ಕಂಡು ಶಿವ ಬೆಳಕ— ನಾಡೊಳಗೆ
ಸೊಲ್ಲೆತ್ತಿ ಜನವು ಹಾಡುವುದು" —



...... ಹೌದು. ಜನತೆಯಲ್ಲಿದ್ದ ಅಜ್ಞಾನ ಮೂಢನಂಬಿಕೆಗಳೆಂಬ ತಮಂಧ ವನ್ನು ಹೋಗಲಾಡಿಸಲು ಅರ್ಕನಾಗಿ ಜನಿಸಿ ಬಂದ ಬಸವಣ್ಣನವರನ್ನು ಜನತೆ ಹೊಗಳಿ ಹಾಡದೆ ಇರದು.

ಅಂದು ಕಲ್ಯಾಣಕ್ಕೆ ಬಂದ ಅಸಂಖ್ಯಾತ ಶರಣರೆಲ್ಲರೂ ಯಾವುದಾದರೊಂದು ಕಾಯಕವನ್ನು "ಕಾಯಕವೇ ಕೈಲಾಸ" ಎಂದು ಸಾರುತ್ತ ಆ ನಂಬಿಕೆಯಿಂದಲೇ ಅನುಸರಿಸಿದ್ದರು. ವ್ಯಕ್ತಿ ಯಾರೇ ಆಗಲಿ ಕಾಯಕವನ್ನು ಅನುಸರಿಸಲೇ ಬೇಕು. ಇದು ಬಸವಣ್ಣನವರ ಅಭಿಮತ. ಇದನ್ನೇ ಜನಪದ ಕವಿ —"ಕಾಯಕವ ಕಲಿಸಿ ದಕೆ ನಾಯಕನು, ಬಸವಯ್ಯ" ಎಂದು ಸರಳವಾಗಿ ಅಂದಿನ ಕಾರ್ಯಕ್ಷೇತ್ರದ ನೇತಾ ರರೇ ಬಸವಣ್ಣ ಎಂದು ಹೇಳಿದ್ದಾನೆ.

ಹಿಂದೆ ವಿದ್ಯಾವಂತರೆನಿಸಿಕೊಂಡ ಗುಂಪು, ವೇದೋಕ್ತವನ್ನೆಲ್ಲ ಜನರಿಗೆ ಸಮ ರ್ಪಕವಾಗಿ ತಿಳಿಸದೇ ಎಲ್ಲವನ್ನು ತಮ್ಮ ಸ್ವಾರ್ಥಕ್ಕಾಗಿ ಬಳಸಿಕೊಂಡು ಸಾಮಾನ್ಯ ಜನರನ್ನು ಸುಲಿಗೆ ಮಾಡುತ್ತಿದ್ದರು. ಇದನ್ನು ನೋಡಿದ ಬಸವಣ್ಣ ಮಾಡಿದ ಕಾರ್ಯವನ್ನು ಈ ಕವಿಯ ಬಾಯಿಂದಲೇ ಕೇಳೋಣ.

ಹುಸಿಯ
"ಓದಿದನು ಬಸವಯ್ಯ ವೇದದೊಳಗಿನ
ಭೇದ ಭೇದವನೆ ಬಿಚ್ಚಿಟ್ಟ ಜನಪದಕೆ"— ಅಷ್ಟೇ ಅಲ್ಲ —
ಕೀಳು ಮೇಲೆಂಬ ಬಲೆಯಾಕ ಕಿತ್ತೊಗೆದ"

ಇಂಥ ಶರಣನನ್ನು ಕುರಿತು ಜನಪದ ಕವಿ,

"ಬಸವ ಭಕ್ತಿಯ ಬೀಜ ಬಸವ ಮುಕ್ತಿಯ ತೇಜ
ಬಸವ ಕಾಯಕದ ಗುರು ಬೀಜ–ಶಿವ ಮತಕೆ
ಬಸವ ಓಂಕಾರ ಶಿವನಾಮ "—ಎಂದು ಹಾಡುತ್ತ " ಭಲರೆ,

ಬಸವಯ್ಯ, ಬಸವರಸ"—ಎಂದು ಹೊಗಳುತ್ತಾನೆ.

"ಮುಗ್ಧ ಶರಣರ ಹಾಡು ಸಿದ್ಧಿ ಮಂತ್ರವು ನೋಡು" ಎಂದು ಹೇಳುವ ಈ ಕವಿ ಮುಗ್ಧ ಶರಣರನ್ನು ಮರೆತಿಲ್ಲ. ಮುಗ್ಧಶರಣ ಕುರುಬರ ಗೊಲ್ಲಾಳನ ಲಿಂಗ ನಿಷ್ಠೆಯನ್ನು ಅವನ ವ್ಯಕ್ತಿತ್ವವನ್ನು ಸಹಜವಾಗಿ ಹಾಡಿದ್ದಾರೆ.

ವಿಜಾಪುರ ಜಿಲ್ಲೆಯ ಸಿಂದಗಿಯ ಹತ್ತಿರ ಗೋಲಗಿರಿಯೆಂಬ ಗ್ರಾಮದ ಕಾಕ ಕೋಟನೆಂಬ ಕುರುಬನ ಮಗನೇ ಗೊಲ್ಲಾಳ. ದಿನಾಲು ಕುರಿಗಳನ್ನು ಮೇಯಿಸಿ

ಕೊಂಡು ಬರುವುದು ಈತನ ಕಾಯಕ. ಒಮ್ಮೆ ಒಂದು ಪರಿಷೆ ಶ್ರೀಶೈಲಕ್ಕೆ ಈ ಮಾರ್ಗವಾಗಿಯೇ ಹೋಗುತ್ತಿರುತ್ತದೆ. ಅವರನ್ನು ಕುರಿತು ಗೊಲ್ಲಾಳ— 'ಎಲ್ಲಿಗೆ ಹೋಗುವಿರಿ" ಎಂದು ಹೇಳುತ್ತಾನೆ. ಆ ಪರಿಷೆ ತಾವು "ಮುದಿ ಮಲ್ಲೇಶ್ವರಕ್ಕೆ ಹೋಗುತ್ತಿದ್ದೇವೆ'' ಎನ್ನುತ್ತಾರೆ. ಆ ಪರಿಷೆಯಲ್ಲಿ ಬರುತ್ತಿದ್ದ ಮುದಿ ಜಂಗಮ ಪಾದರಕ್ಷೆಯನ್ನು ಬೇಡಿ ಲಿಂಗವನ್ನು ತಂದು ಕೊಡುವೆನೆಂದು ಹೇಳಿ ಗೊಲ್ಲಾಳನಿಂದ ಅದನ್ನು ಪಡೆಯುತ್ತಾನೆ ಆದರೆ ಹಿಂತಿರುಗಿ ಬರುವಾಗ ಲಿಂಗವನ್ನು ತರಲು ಮರೆತ ಆ ಜಂಗಮ ಅಲ್ಲಿಯೇ ಬಿದ್ದಿದ್ದ ಕುರಿಯ ಹಿಕ್ಕೆಯನ್ನು ತೆಗೆದುಕೊಟ್ಟು ಅದನ್ನು ಪೂಜಿಸುವಂತೆ ಹೇಳಿ ಹೊರಟು ಹೋಗುತ್ತಾನೆ. ಆ ಗೊಲ್ಲಾಳನು ಅದನ್ನೇ ಲಿಂಗವೆಂದು ಭ್ರಮಿಸಿ ಪೂಜಿಸುತ್ತಿರುವುದನ್ನು ಜಾನಪದ ಕವಿ ಸರಳವಾಗಿ ಚಿತ್ರಿಸಿದ್ದಾನೆ.

"ಮಳಲದಿನ್ನೆಯ ಮಾಡಿ ಹೊಳೆವ ಹಿಕ್ಕೆಯನ್ನಿಟ್ಟು
ಹೊಳೆಯ ಲಿಂಗಿಲ್ಲಿ ನೆನೆ ಎಂದು—ಭಕ್ತಿಯಲಿ
ತಿಳಿಗೊಳದ ನೀರ ಸಿಂಪಡಿಸಿ "—ಆ ಲಿಂಗಕ್ಕೆ ಅಭಿಷೇಕ ಮಾಡಿ
"ಕಾಡ ಪತ್ರಿಯನೆತ್ತಿ ಕಾಡ ಹೂಗಳ ಕೊಯ್ದು
ಒಡ್ಯಾಡಿ ತಂದು ಶಿವ ಪೂಜೆ ಮಾಡಿದರು । ನೋಡಿ ನಗುತ್ತಿದ್ದ
ಶಿವಲಿಂಗ"—

ಹೀಗೆ ಶಿವನಿಗೆ ತೃಪ್ತಿಯಾಗುವಂತೆ ಪೂಜಿಸಿದಲ್ಲದೆ "ನೊರೆ ಬಂದ ಕುರಿ ಹಾಲ ಹರಗೆಂದು ಎಡೆ ಮಾಡುತ್ತಿರುತ್ತಾನೆ. ಈ ವಿಷಯ ತಿಳಿದ ತಂದೆ ಹುಡುಕುತ್ತಾ ಬಂದು ಇಲ್ಲಿ ನೋಡಿದಾಗ ಇಲ್ಲಿ ಕುರಿಯ ಹಾಲ ಕರೆದು ಹಿಕ್ಕೆಯ ಮೇಲೆ ಹೊಯ್ಯುವುದನ್ನು ನೋಡಿ ಅದನ್ನು ಒದೆಯಲು, ಗೊಲ್ಲಾಳನು—"ಹರನೊದ್ದ ನರಪಾಪಿ ಇರಲಾರೆ ಬದುಕಿನ್ನು ಕರೆಯಲಾರಿನ್ನು ತಂದೆಂದು'' ಎಂದು ತಂದೆ ಮಾಡಿದ ಶಿವದ್ರೋಹವನ್ನು ಸಹಿಸದೆ ಆತನನ್ನು ಕೊಡಲಿಯಿಂದ ಕೊಂದುಹಾಕಿದನು. ಆಗ ಆತನ ಭಕ್ತಿಗೆ ನಿಷ್ಠೆಗೆ ಮೆಚ್ಚಿದ ಶಿವನು— "ನಿನಗೇನು ವರ ಬೇಕೆಂದು ಕೇಳಿದಾಗ'', "ನಿನ್ನನ್ನು ಯಾವಾಗಲೂ ಪೂಜಿಸುವ ವರ ನೀಡು'' ಎಂದು ಕೇಳಿಕೊಳ್ಳುತ್ತಾನೆ. ಆಗ ಶಿವನು ನೀನು ಪೂಜಿಸುವ ಹಿಕ್ಕೆಯಲ್ಲಿ ನಾನಿರುತ್ತೇನೆಂದು ಹೇಳಿ ಅಂತರ್ಧಾನನಾಗುತ್ತಾನೆ. ಅಂದಿನಿಂದ ಅದಕ್ಕೆ ಗೊಲ್ಲೇಶ್ವರನೆಂದು ಕರೆದು ಜನರು ಪೂಜಿಸತೊಡಗಿದರು. ಹೀಗೆ ಮುಗ್ಧ ಕೋಳೂರು ಕೊಡಗೂಸಿನ ಕಥೆಯೂ ಮನೋಜ್ಞವಾಗಿದೆ.

ಮತ್ತೊಬ್ಬ ಶರಣ—ಉಂಬಲ್ಲಉಡುವಲ್ಲಿ ಕೊಂಬಲ್ಲಿಕೊಡುವಲ್ಲಿ ಶಂಭುಹರನೆಂದು........ಹೇಳುತ್ತ ಚೋಳರಾಜನ ಅಶ್ವಾಲಯಕ್ಕೆ ಹುಲ್ಲು ತಂದು ಹಾಕುವ ಕಾಯಕಕ್ಕೆಗೊಂಡಿದ್ದ ಮಾದಾರ ಚೆನ್ನಯ್ಯ. ಈತನನ್ನು ಕುರಿತು ಬಸವಣ್ಣ—



"ಅಪ್ಪನು ನಮ್ಮ ಮಾದಾರ ಚೆನ್ನಯ್ಯ'' —"ಚೆನ್ನಯ್ಯನ ಮಗ ನಾನು''
"ಚೆನ್ನಯ್ಯನೆಮ್ಮಯ್ಯನು" ಎಂದು ಭಕ್ತಿಯಿಂದ ಮನವುಕ್ಕಿ ಹಾಡಿದ್ದಾರೆ.

ಚೆನ್ನಯ್ಯ ದಿನಾಲು ಬೆಳಗ್ಗೆ ಎದ್ದು ತನ್ನ ಕಾಯಕ ಮುಗಿಸಿ ಮನೆಗೆ ಬಂದಾಗ —"ಮಡದಿ ಗಂಗಾದೇವಿ ಒಡೆಯ ಚೆನ್ನನ ಕಂಡು,

'ಒಡಲೂಟವುಂಡು ಆನಂದ ನೀಡುವಳು''. ಚೆನ್ನಯ್ಯನು ಶಿವನಿಗೆ ನೈವೇದ್ಯ ಮಾಡಿ ತಾನು ಊಟ ಮಾಡುವ ಪದ್ಧತಿ ಇಟ್ಟು ಕೊಂಡಿದ್ದವನು. ಒಂದು ದಿನ ಚೆನ್ನಯ್ಯನು ಅಂಬಲಿ ಕುಡಿವ ಸಮಯದಲ್ಲಿ ಹಸಿದಿರುವೆನೆಂದು ಹೇಳಿ ಅವನೊಡನುಂಡು ಹೋಗುವನು

ಇತ್ತ ಆ ಊರಿನ ರಾಜನಾದ ಚೋಳರಾಜನು ಎಂದಿನಂತೆ ನೈವೇದ್ಯ ಮಾಡಿ —"ನನ್ನೆದುರು ಉಣ್ಣುವುದಕ್ಕೆ ಮನ್ನಣೆಯು ತರದಿರಲು ಉಣ್ಣು ಮರೆಮಾಡಿ ನಿಲ್ಲುವೆನು''—ಎಂದು ಹೇಳಿ ಮರೆಮಾಡಿ ನಿಂತು ಗಳಿಗೆ ಬಿಟ್ಟು ನೋಡಿದಾಗ ಅದೆಲ್ಲ ಹಾಗೆಯೇ ಇರುವುದನ್ನು ಕಂಡು ತನ್ನ ಭಕ್ತಿ ಶಿವನಿಗೆ ಮೆಚ್ಚಿಗೆಯಾಗಲಿಲ್ಲ ಎಂದು ಕೊಂಡು,

"ಇದ್ದೇನು ಈ ಜೀವ ಕೆಟ್ಟನೆಲೆ ಶಿವಲಿಂಗ
ಮುಟ್ಟದಲೆ ಹೋಯ್ತು ಶಿವಭಕ್ತಿ''

ಎಂದು ಹೇಳಿ ಒರೆಯಿಂದ ಕತ್ತಿಯನ್ನು ತೆಗೆಯಲು ಶಿವನು ಪ್ರತ್ಯಕ್ಷನಾಗಿ—"ತಡೆ ಚೋಳ ಬಿಡಬೇಡ. ಒಡಲೂಟ ಉಂಡಿಹೆನು ಬಡವ ಚೆನ್ನಯ್ಯನೊಡಗೂಡಿ ಅಂಬಲಿಯ'' ಎಂದು ಹೇಳಿದಾಗ ಇಂಥ ಭಕ್ತ ತನ್ನ ನಾಡಿನಲ್ಲಿರುವನೆಂದು ತಿಳಿದು ಅವನನ್ನು ಹುಡುಕಿಕೊಂಡು ಬಂದು ಸಾಷ್ಟಾಂಗವೆರಗುತ್ತಾನೆ. ಆಗ

"ನಡುಗುತಲಿ ಚೆನ್ನಯ್ಯ ಹುಡುಗುಡುಗಿ ಮನದೊಳಗೆ
"ಎಂದು ಬೇಡಿಕೊಳ್ಳುತ್ತಾನೆ.
ಬಿಡು ಅರಸ ಕಾಲ ನನ್ನಾಣೆ''

ಉದ್ವಿಗ್ನಗೊಂಡು ಚೆನ್ನಯ್ಯ ಶಿವನಿಲಯವನ್ನು ಹೊಕ್ಕು—"ಶಿವನಿಗೆ ತರವೆ ಈ ಆಟ "ನೀನು ಈ ರೀತಿ ಮಾಡಿದ್ದು ಸರಿಯೆ ?

"ಇದೆ ಕೊಳ್ಳು ಶಿವನನ್ನು ಹದನಾದ ಶಿವಭಕ್ತಿ
ಎನೆ ಮಾತು ಎಂದು ಕಂಭಕ್ಕೆ ತಲೆಗೊಡಲು
ಸದರು ಝುಗ ಝುಗಿಸಿ, ಶಿವ ಪ್ರತ್ಯಕ್ಷನಾಗಿ ಗಣಪದವಿಕೊಡುತ್ತಾನೆ.

ಮತ್ತೊಬ್ಬ ಶರಣ ಇಳಿಹಾಳ ಬೊಮ್ಮಯ್ಯ ಈತನ ವೃತ್ತಿ ವ್ಯವಸಾಯ ಮಾಡುವುದು—"ಒಂದಕ್ಕೆ ಎರಡಾಗಿ, ಚೆಂದಾಗಿ ಮಳೆಯು ಬಂದಿಳಿತು ಸಿರಿಯು ಹೊಲದೊಳಗೆ"-ಸಮೃದ್ಧಿಯಾಗಿ ಬೆಳೆದ ಬೆಳೆಯನ್ನು ಈತ ಎಲ್ಲರಿಗೂ ಹಂಚುತ್ತಿದ್ದನು. ತನ್ನ ಅಗಾಧ ಸಿರಿಸಂಪತ್ತು ತನ್ನದೆಂದು ತಿಳಿದಿರಲಿಲ್ಲ.

'ಮಾತಿನೊಳು ದಾಸೋಹ ನೀತಿಯೊಳು ದಾಸೋಹ

ಭೂತದಯೆ ನಿತ್ಯದಾಸೋಹ ಮಾಡುತ್ತ' ಅದೆ ಸರ್ವಸ್ವ ಎಂದು-

ಬಗೆದಿದ್ದನು. ಹೀಗಿರಲು ಒಮ್ಮೆ ಆ ಊರಿಗೆ ಬರಗಾಲ ಬಂದಿತಂತೆ. ಜಾನಪದ ಕವಿ ಆ ಭೀಕರತೆಯನ್ನು ಹೀಗೆ ವರ್ಣಿಸಿದ್ದಾರೆ:

"ತುಂಬಿ ಹರಿಯುವ ಹೊಳೆಯು ಸಿಂಬಿಯಾಯಿತು ಬತ್ತಿ

ಕಂಬನಿಯ ಸುರಿಸಿ ನೀರಡಿಸಿ ಪಶುಪಕ್ಷಿ

ಇಂಬು ಬೇಡಿದವು ಮುಖವೆತ್ತಿ"—ಜನರ ಈ ಗೋಳಿನ ಕೂಗನ್ನು

ಕೇಳಿದ ಶಿವನು ಮಳೆ ಸುರಿಸುತ್ತಾನೆ. ಆಗ ಇಳಿಹಾಳ ಬೊಮ್ಮಯ್ಯ ಬಿಳಿ ಜೋಳದ ಕಡಲೆಗಳನ್ನು ನೆನೆಸಿ ಅದನ್ನು ಬಿತ್ತಲು ತೆಗೆದುಕೊಂಡು ಹೋಗುತ್ತಾನೆ. ಆ ಸಮಯದಲ್ಲಿ ಶ್ರೀ ಶೈಲಕ್ಕೆ ಹೊರಟಿದ್ದ ಒಂದು ಪರಿಷೆಹಸುವಿನಿಂದ ಕಂಗೆಟ್ಟು—

"ಕರುಣಿಸೆಲೆ ದಯವಂತ ಕೊರಗುವೆವು ಕಂಗೆಟ್ಟು

ಹರಭಕ್ತರೆಮಗೆ ಊಟಿಲ್ಲ ನೆರವಾಗು"—ಎಂದು ಕೇಳಿಕೊಳ್ಳುತ್ತಾರೆ.

ಆಗ ಶರಣನ ಮನಸ್ಸು ಕರಗಿ ಎಲ್ಲವನ್ನು ಪರಿಷೆಗೆ ಹಂಚುತ್ತಾನೆ. ಕೊನೆಗೆ ಅಲ್ಲಿ ಉಳಿದುದು ಪಂಚಬೀಜಗಳು ಮಾತ್ರ—

ಸಿದ್ಧಗಂಗಾ

"ಪಂಚಮುಖ ಮಹಾದೇವ ಪಂಚ ಬೀಜಗಳಾಗಿ
ಸಂಚಾಗಿ ಬಂದ ಬೊಮ್ಮನಾ ಕಾಯಕದ
ಮಿಂಚು ತೋರಿಸಲು ಜಗದೊಳಗೆ"—ಆತ ಆ ಐದು ಬೀಜಗಳನ್ನು ಅಲ್ಲೊಂದು ಇಲ್ಲೊಂದು ನೆಟ್ಟು ಮನೆಗೆ ಮರಳುತ್ತಾನೆ. ಆಗ ಶಿವನು ಈತನ-ನಿಷ್ಠೆಗೆ ಮೆಚ್ಚುತ್ತಾನೆ. ಪಂಚ ಬೀಜಗಳೆಲ್ಲ ಹೊಲದಲ್ಲಿ ಸಂಚರಿಸಿ ಹುಲುಸಾಗಿ ಬೆಳೆದು ನೋಡಿದ ಜನಕ್ಕೆಲ್ಲ ಅಚ್ಚರಿಯಾಗುತ್ತದೆ. ಅನಂತರ ಬೊಮ್ಮಯ್ಯನು—

—"ಬೆಳೆ ಬಂದ ದಿವಸದೊಳು ಅಳೆದು ಅರಸಗೆ ಕೊಟ್ಟು
ಉಳಿದುದನು ರೈತರಿಗೆ ಹಂಚುತ್ತಾನೆ." ಈತನ ಕೀರ್ತಿಯನ್ನು ಲೋಕವೆಲ್ಲ ಹೊಗಳುತ್ತದೆ.

ಹೀಗೆ ಜಾನಪದ ಕವಿಗಳು ಶರಣರ ವ್ಯಕ್ತಿತ್ವನ್ನು ಸುಂದರವಾಗಿ ಚಿತ್ರಿಸಿ ಜನತೆಯ ಮುಂದಿಟ್ಟು ಅವರೂ ನೆನೆಯುವಂತೆ ಮಾಡಿದ್ದಾರೆ.

—"ಶರಣರ ನೆನೆದಾರ ಸರಗೀಯ ಇಟ್ಹಾಂಗ
ಅರಳ ಮಲ್ಲಿಗಿ ಮುಡಿದ್ಹಾಂಗ, ಕಲ್ಯಾಣ
ಶರಣರ ನೆನೆಯೆ ಮನಮನವೆ"

---

## ಕಾಯಕ

"ವ್ಯಾಸ ಬೋಯಿತಿಯ ಮಗ ಮಾರ್ಕಂಡೇಯ ಮಾತಂಗಿಯ ಮಗ-ಮಂಡೋದರಿ ಕಪ್ಪೆಯ ಮಗಳು, ಕುಲವನರಸದಿರಿಂಭೋ, ಕುಲದಿಂದ ಮುನ್ನೇನಾದಿರಿಂಭೋ? ಸಾಕ್ಷಾತ್ ಅಗಸ್ತ್ಯ ಕಬ್ಬಿಲ, ದುರ್ವಾಸ ಮುಚ್ಚಿಗ, ಕಶ್ಯಪ ಕಮ್ಮಾರ, ಕೌಂಟಿಲ್ಯನೆಂಬ ಋಷಿ ಮೂರು ಭುವನವರಿಯೆ ನಾಯಿದ ಕಾಣಿಂಭೋ? ನಮ್ಮ ಕೂಡಲಸಂಗನ ವಚನದಿಂತೆಹುದು: ಶ್ವಪಚನಾದಡೇನು,-ಶಿವಭಕ್ತನೇ ಕುಲಜನು.

"ದೇವ ಸಹಿತ ಭಕ್ತ ಮನೆಗೆ ಬಂದರೆ ಕಾಯಕವಾವುದೆಂದು ಬೆಸಗೊಂಡರೆ ನಿಮ್ಮಾಣೆ ನಿಮ್ಮ ಪುರಾತರಾಣೆ! ತಲೆದಂಡ, ತಲೆದಂಡ! ಕೂಡಲ ಸಂಗಮದೇವಾ ಭಕ್ತರ ಕುಲವನರಸಿದರೆ ನಿಮ್ಮ ರಾಣಿವಾಸದಾಣೆ!"

ಗುರು-ಲಿಂಗ-ಜಂಗಮದ ಹೆಸರಿನಿಂದ ಕಾಯಕವ ಮಾಡಿ, ಗುರು ಚರಕೆ ವಂಚಿಸಿ ತಂದೆ ತಾಯಿ ಬಂಧು ಬಳಗ ಹೆಂಡಿರು ಮಕ್ಕಳು ಒಡಹುಟ್ಟಿದರೆಂದು, ಸಮಸ್ತ ಪದಾರ್ಥವ ಭಾಗವ ಮಾಡುವನೊಬ್ಬ ಭಕ್ತ ದ್ರೋಹಿ-ಕೂಡಲಸಂಗಮದೇವಾ!



# ಮಾನವತಾವಾದಿ ಬಸವಣ್ಣ

—ಸ. ಸ. ಮಾಳವಾಡ

ಪಾಶ್ಚಾತ್ಯವಿಚಾರಪ್ರಣಾಲಿಯಲ್ಲಿ 'ಮಾನವತಾವಾದ'ವು ಒಂದು ಪಂಥವಾಗಿ (School) ಪರಿಗಣಿತವಾಗಿದೆ, ಆ ಪದದ ವ್ಯಾಖ್ಯೆಯ ಬಗೆಗೂ ಏಕಾಭಿಪ್ರಾಯವು ಮೂಡಿಬಂದಿಲ್ಲ. ಆದರೆ ಸರ್ವ ಸಾಮಾನ್ಯವಾದ ನಿಲುವೊಂದನ್ನು ಹೀಗೆ ಹೇಳಬಹುದು. ಮಾನವನನ್ನು ಹೆಚ್ಚು ಸತ್ಯವಾದ ಬಗೆಯಲ್ಲಿ ಮಾನವನನ್ನಾಗಿ ಮಾಡುವುದೇ ಮಾನವತಾವಾದಿಯ ನಿಲುವು. ಮಾನವನಲ್ಲಿ ಸುಪ್ತವಾಗಿರುವ ಶಕ್ತಿಯನ್ನು ಹೊರಹೊಮ್ಮಿಸಲು ನಿಸರ್ಗದ, ಸಮಾಜ ವ್ಯವಸ್ಥೆಯ ಎಲ್ಲ ಅನುಕೂಲತೆಗಳಿಗೆ ಮುಕ್ತದ್ವಾರವನ್ನು ಒದಗಿಸುವ ದೃಷ್ಟಿಯು ಆ ನಿಲುವೆಯಲ್ಲಿದೆ. ಎಲ್ಲಾ ಮಾನವರಿಗೂ ಅವಕಾಶಗಳ ಸಮಾನತೆಯನ್ನು ದೊರಕಿಸಿ ಕೊಡುವುದು ಈ ಪಥದ ಗುರಿಯಾಗಿದೆ. ಗುರಿ ಹೀಗಿದ್ದರೂ ಅದರ ಸಾಧನಮಾರ್ಗ ಆ ಬಗೆಗೆ ಇರುವ ದೃಷ್ಟಿಕೋನ ಇವುಗಳು ಬೇರೆ ಬೇರೆಯಾಗಿವೆ. ಕೆಲವನ್ನು ಇಲ್ಲಿ ಗಮನಿಸಬಹುದು.

i ಅನಿರ್ಬಂಧಿತವಾದ ಮಾನವೀಯ ಅನುಭವದ ಹಿರಿಮೆಯನ್ನು ಸಮರ್ಥಿಸುವುದು.

ii ಪುಸ್ತಕ ಪಾಂಡಿತ್ಯದ ಸಂಕುಚಿತತನದ ದರ್ಪವನ್ನು ಪ್ರತಿಭಟಿಸುವುದು.

iii ಮಾನವನ ಅರಿವಿಗೆ ಯಾವ ನಿರ್ಬಂಧವನ್ನೂ ಹಾಕದೆ ಇರುವಂತೆ ನೋಡಿಕೊಳ್ಳುವುದು.

iV ಧಾರ್ಮಿಕ ಸಂಸ್ಥೆಯಿಂದ ವ್ಯಕ್ತಿಯ ವಿಚಾರ ಸ್ವಾತಂತ್ರ್ಯವನ್ನು ರಕ್ಷಿಸುವುದು.

V ಮನಸ್ಸಿನ ಮುಕ್ತದ್ವಾರವನ್ನು ಕಾಯ್ದುಕೊಳ್ಳುವುದು.

Vi ಮಾನವನ ಮತಿಯು ನಿರಂಕುಶವಾಗಿ ಉಳಿಯುವ ವ್ಯವಸ್ಥೆ.

ಹೀಗಿವೆ ಮಾನವತಾವಾದದ ದೃಷ್ಟಿಕೋಣ ಮತ್ತು ಸಾಧನ ಮಾರ್ಗಗಳು. ಬಸವಣ್ಣನವರ ವಿಚಾರ, ಆಚಾರ, ಪ್ರಚಾರಗಳಲ್ಲಿ ಮೇಲ್ಕಂಡ ಎಲ್ಲ ಅಂಶಗಳೂ ಸಾಮಾನ್ಯವಾಗಿ ಅಡಕವಾದಂತಿವೆ.

ಕ್ರಿಸ್ತಪೂರ್ವ ಐದನೆಯ ಶತಕದ ಸಾಕ್ರೆಟೀಸ್‌ನ ವಿಚಾರ ಪ್ರಣಾಲಿಯಲ್ಲಿ ಮಾನವತಾವಾದದ ಬಿತ್ತುಗಳು ಅಡಗಿದ್ದವೆನ್ನಬಹುದು. ಹಾಗಿದ್ದರೂ ಪಾಶ್ಚಾತ್ಯರ ಜೀವನವಾಹಿನಿಯಲ್ಲಿ ಮಾನವತಾವಾದವು ಬಹುಕಾಲದವರೆಗೆ ಮುಸುಕಾಗಿಯೇ ಉಳಿದಿತ್ತು. ಈ ದಿಸೆಯಲ್ಲಿ ಇಟಲಿ ದೇಶವು ಪುರೋಗಾಮಿಯಾಯಿತೆಂಬು

ಭಾವಿಸಲಾಗಿದೆ. ಪ್ರಭುತ್ವದವರು, ಸಂಘಟಿತ ಧಾರ್ಮಿಕ-ಸಂಸ್ಥೆಗಳು ಮಾನವನ ಹಕ್ಕಾದ ಮನಸ್ಸಿನ ಮುಕ್ತದ್ವಾರಕ್ಕೆ ಅಡೆತಡೆಗಳನ್ನು ಯಾವಾಗಲೂ ತಂದಿದ್ದಾರೆ. ಹದಿನೆಂಟನೆಯ ಶತಕದ ಮಾರ್ಟಿನ್‌ಲೂಥರ್‌ನಿಂದ ೧೭೮೯ರ ಫ್ರೆಂಚ್ ಕ್ರಾಂತಿಯಿಂದ ಮಾನವತಾವಾದಕ್ಕೆ ಕಳೆಯೇರಿತು. ಮಧ್ಯ ಮತ್ತು ಆಧುನಿಕ ಯುಗಗಳ ಸಂಕ್ರಮಣದ ಅವಧಿಯಲ್ಲಿ ಪಾಶ್ಚಾತ್ಯರು ಮಾನವತಾವಾದಕ್ಕೆ ಪ್ರಾಮುಖ್ಯವನ್ನು ಕೊಟ್ಟರು. ಅನೇಕ ವಿಚಾರವಂತ ಲೇಖಕರು ತಮ್ಮ ವಿಚಾರ ಪ್ರಣಾಲಿಯನ್ನು ಹರಡಿದರು. ಆಗ ಚರ್ಚಿನ ಅಂಕಿತಕ್ಕೆ ಒಳಗಾಗದ ಧರ್ಮಾತೀತ (Secular) ವಿಚಾರ ಪ್ರಣಾಲಿ ಪ್ರಾಧಾನ್ಯ ಪಡೆಯಿತು. ಮಧ್ಯಯುಗದ ನಿರ್ಬಂಧಗಳನ್ನು ಸಡಲಿಸುವ ಪ್ರಯತ್ನ ನಡೆಯಿತು. ಸರಳವಾದ ವಿಚಾರವನ್ನು ಸರಳವಾದ ಭಾಷೆಯಲ್ಲಿ ಒಡಮೂಡಿಸಬೇಕೆನ್ನುವ ಆಂದೋಲನ ತಲೆದೋರಿತು. ಬೌದ್ಧಿಕ, ನೈತಿಕ ವಿಕಾಸಕ್ಕೆ ಪರಿಣಾಮಕಾರಿಯಾದ ಹಾದಿಯನ್ನು ಸಮರ್ಥಿಸಲಾಯಿತು.

ಮಾನವತಾವಾದದ ಗುರಿಯನ್ನು ಸಾಧಿಸುವಲ್ಲಿ ಮುಖ್ಯವಾದ ತೊಡಕೆಂದರೆ ಮಾನವನ ಸ್ವಾರ್ಥದೃಷ್ಟಿಯೇ ಆಗಿದೆ. ಈ ಬಗೆಯ ಸ್ವಾರ್ಥದಿಂದಾಗಿ ಸಂಪತ್ತು, ಅಧಿಕಾರ, ಜ್ಞಾನ, ಸೌಲಭ್ಯಗಳ ಕೇಂದ್ರೀಕರಣ ನಡೆಯುತ್ತಿದೆ. ಸ್ವಾರ್ಥದೃಷ್ಟಿಗೆ ಬುದ್ಧಿವಂತಿಕೆಯು, ವಿಪರ್ಯಸ್ತಧಾರ್ಮಿಕ ಕಲ್ಪನೆಯು, ಪ್ರಭುತ್ವದ ನೆರವು ದೊರೆತಾಗ ಮಾನವನ ಮಾನವತ್ವವೇ ನಶಿಸಿ ಹೋಗುವ ಸನ್ನಿವೇಶ ತಲೆದೋರುತ್ತದೆ. ಪಾಶ್ಚಾತ್ಯ ಶ್ವೇತ ವರ್ಣೀಯರು, ಕಪ್ಪುಜನಾಂಗದವರ ಮಾನವತೆಯನ್ನೂ ಗುರುತಿಸದಂತಹ ಸಂಕುಚಿತ ದೃಷ್ಟಿಯನ್ನು ಪ್ರದರ್ಶಿಸಿದ್ದಾರೆ. ಪಾಶ್ಚಾತ್ಯ ದೇಶಗಳಲ್ಲಿ ಮಾನವೀಯ ಸಮಾನತೆಯನ್ನು ಗುರುತಿಸದೆ ಇರುವ ದೃಷ್ಟಿಯ ಒಂದು ಕ್ರೂರ ಪ್ರತಿಕ್ರಿಯೆಯು ಹಿಟ್ಲರನ "ಜನಾಂಗಶ್ರೇಷ್ಠತೆ"ಯ ಘೋಷಣೆಯಾಗಿ ಪರಿಣಮಿಸಿತು. ಅದರ ಕಹಿಫಲಗಳನ್ನು ಜಗತ್ತು ಇಂದಿಗೂ ಕಾಣುತ್ತಿದೆ.

ಏಸುಕ್ರಿಸ್ತ ಮಾನವ ಪ್ರೇಮದ ಸಂದೇಶವನ್ನೇ ಬಿತ್ತರಿಸಿದ. ಆದರೆ ಧಾರ್ಮಿಕ ಆಚರಣೆ ಪ್ರಬಲವಾಗಿ ಪರಮಾತ್ಮನೇ ಹಿಂದೆ ಉಳಿದ ಸನ್ನಿವೇಶಗಳು ಪಾಶ್ಚಾತ್ಯ ದೇಶಗಳಲ್ಲಿಯೇ ತಲೆದೋರಿದವು. ಇಲ್ಲವೆ ಮಾನವನ ಅಧೋಚೇತನವೇ ಮುಂದಾಗಿ ಆತನ ದೈವತ್ವವು ಹಿಂದೆ ಉಳಿದ ಸಂದರ್ಭಗಳೂ ಇವೆ. ಸಮಾಜ ಸ್ವಾಸ್ಥ್ಯಕ್ಕೆಂದು ರಚಿತವಾದ ಧರ್ಮಶಾಸ್ತ್ರ ಮಾನವ-ಮಾನವರಲ್ಲಿ ವಿಷಮತೆಯನ್ನು ಬಿತ್ತುವ ಸಾಧನವಾಗಿ ಬಳಕೆಯಾದ ಉದಾಹರಣೆಗಳು ಭಾರತ ದೇಶದಲ್ಲಿಯೂ ದೊರೆಯುತ್ತಿವೆ. ಸಕಲ ಜೀವಿಗಳಲ್ಲಿ-ಜಡದಲ್ಲಿಯೂ ಕೂಡ-ದೇವಾಂಶವನ್ನು ಎಂದಿನಿಂದಲೂ ಒಪ್ಪಿಕೊಂಡ ಭಾರತೀಯರಿಗೆ 'ಮಾನವತಾವಾದ' ಎಂಬ ಪಂಥದ (School) ಅವಶ್ಯಕತೆ ಇರಲಿ-



ಲ್ಲವೇನೋ ನಿಜ. ಆದರೆ ಧರ್ಮಶಾಸ್ತ್ರದ ನೆರವಿನಿಂದ ಸಮಾಜವ್ಯವಸ್ಥೆಯು ನೆವದಿಂದ- ಜನ್ಮ, ಜಾತಿ, ವೃತ್ತಿ, ಲಿಂಗಭೇದ ಕಲ್ಪಿಸಿದಾಗ ಮಾನವರಲ್ಲಿಯ ಸಮಾನತೆಯನ್ನು ಅಳಿದುಹೋದ ದುರ್ಧರ ಸನ್ನಿವೇಶಗಳೂ ನಮ್ಮಲ್ಲಿ ಬೆಳೆದು ಬಂದುವು. ಆಗ ಸಕಲ ಮಾನವರಲ್ಲಿಯ ಸಮಾನತೆಯನ್ನು ಸಮರ್ಥಿಸುವ, ಸಾಧಿಸುವ ಬುದ್ಧ ಬಸವರಂಥಹ ಕ್ರಾಂತಿಪುರುಷರು ಭಾರತದಲ್ಲಿ ಉದಯವಾದರು. ಸದ್ಭಾವ, ಸದಾಚಾರಗಳು ಮಾನವೀಯ ಸಮಾನತೆಗೆ ತಳಹದಿಯಾಗಬೇಕೆಂದು ಬುದ್ಧ ಘೋಷಿಸಿದ ಕ್ರಿ. ಪೂ ಆರನೆಯ ಶತಕದಲ್ಲಿ ಸದ್ಭಾವ, ಸದಾಚಾರಗಳಿಗೆ ಸದ್ಭಕ್ತಿಯನ್ನೂ ಸೇರಿಸಿ ಬಸವಣ್ಣ ದಿಟ್ಟವಾದ ಹೊಸ ಹೆಜ್ಜೆಗಳನ್ನಿಟ್ಟ. ಕ್ರಿ. ಶ. ಹನ್ನೆರಡನೆಯ ಶತಕದಲ್ಲಿ ಬುದ್ಧ, ಬಸವರ ಕಾಲದ ಧಾರ್ಮಿಕ, ಸಾಮಾಜಿಕ, ಅವನತಿಯು ಒಂದೇ ಬಗೆಯದಾಗಿತ್ತು. ಅಂತೆಯೇ ಬುದ್ಧ, ಬಸವರ ಉದಯದ ಅವಶ್ಯಕತೆಯು ಆರಂಭದಲ್ಲಿ ಹೆಚ್ಚಾಗಿ ಕಂಡುಬಂದಿತ್ತು. ಅವರಿಬ್ಬರ ಕಾಲದಲ್ಲಿಯೂ ಅವಿರತವಾದ ತಾತ್ವಿಕ ಚರ್ಚೆಗಳು ಜಟಿಲವಾದ ವ್ರತನೇಮಗಳು ಜಾತಿಭೇದಗಳು ಬೆಳೆದು ನಿಂತಿದ್ದವು. ಕರ್ಮಕಾಂಡಕ್ಕೆ ಅನುಚಿತವಾದ ಮಹತ್ವದೊರೆತಿತ್ತು. ಧರ್ಮದ ಹೆಸರಿನಲ್ಲಿ ಅಧರ್ಮ ರೂಢವಾಗಿತ್ತು. ಹಿಂಸಾವೃತ್ತಿ ಬೆಳೆದಿತ್ತು. ಬಸವಣ್ಣನ ಕಾಲಕ್ಕೆ ಮತಮತಾಂತರಗಳ ಗಲಭೆ ಇನ್ನೂ ಹೆಚ್ಚಿತ್ತು. ಹೋಮದ ನೆವದಿಂದ ಹೋತನ್ನು ತಿನ್ನುವ ಪದ್ಧತಿಯನ್ನು ಬಸವಣ್ಣ ವಿಡಂಬಿಸುವ ಪರಿಸ್ಥಿತಿಯೊದಗಿ ಬಂದಿತ್ತು. ತಾತ್ವಿಕ ಚರ್ಚೆಗಳ ಹೋರಾಟದಲ್ಲಿ ವಿವಿಧ ಪಂಥಗಳ ಏರಾಟದಲ್ಲಿ ಸತ್ಯ ಶುದ್ಧವಾದ ಭಕ್ತಿ ಮುಸಳಿಸಿದಂತಾಗಿತ್ತು. ಸಾಮಾನ್ಯ ಜನತೆ ಧರ್ಮದ ನಿಜವಾದ ತಿಳಿವಿನಿಂದ ವಂಚಿತವಾಗಿತ್ತು. ಹಾಳು ಮೊರಡಿಗಳಲ್ಲಿ, ಊರದಾರಿಗಳಲ್ಲಿ, ಗ್ರಾಮದ ಮಧ್ಯದಲ್ಲಿ ಮಾರಯ್ಯ, ಬೀರಯ್ಯ, ಅಂತರ, ಬೆಂತರ, ಕಾಳಯ್ಯ, ಕೇತಯ್ಯಗಳೆಂಬ ನೂರಾರುಕ್ಷುದ್ರ ದೇವತೆಗಳು ಭೂತ, ಜನತೆಯಲ್ಲಿ ಕಂಡ- ವಾಗಿದ್ದವು ಅದರಿಂದ ಪರಮಾತ್ಮನ ಬಗೆಗೆ ಸರಿಯಾದ ಕಲ್ಪನೆ ಬರುತ್ತಿದ್ದಿಲ್ಲ, ಅನುಚಿತವಾದ ಅಧಿಕಾರವನ್ನು ಪಡೆದು ಅಟ್ಟಹಾಸ ಮಾಡುತ್ತಿದ್ದ ಪುರೋಹಿತ ವರ್ಗದ ದರ್ಪ ಹೆಚ್ಚಾಗಿತ್ತು. ಪಂಡಿತರು ಪಾಂಡಿತ್ಯದ ಪ್ರತಿಷ್ಠೆಯನ್ನು ಮೆರೆಯುವಲ್ಲಿ ನಿರತರಾಗಿದ್ದರು ಅವರಿಗೆ ಮಾನವ ಮಾನವರಲ್ಲಿಯ ಸಮಾನತೆಯ ದೃಷ್ಟಿಯಿರಲಿಲ್ಲ. ಅನ್ಯಾಯದ ಹಳದಿಯ ಮೇಲೆ ಮಾನವರಲ್ಲಿ ಉಚ್ಚ-ನೀಚಭೇದ ವನ್ನು ಕಲ್ಪಿಸಲಾಗಿತ್ತು. ಮಾತಿನಂತೆ -ಮನವಿಲ್ಲದ ಜಾತಿಡೊಂಬರ ಪ್ರಾಬಲ್ಯವಿತ್ತು. ಹೀಗಾಗಿ ಮಾನವರನ್ನು ಒಂದುಗೂಡಿಸುವ ಅವರ ಸಮಾನತೆಯನ್ನು ಸಮರ್ಥಿಸುವ ಪರಿಸ್ಥಿತಿ ಆಗ ಅಸ್ತಿತ್ವದಲ್ಲಿರಲಿಲ್ಲ. ಈ ಬಗೆಯ ವಾತಾವರಣವನ್ನು ಕಂಡ ಬಸವಣ್ಣ ಹನ್ನೆರಡನೆಯ ಶತಮಾನದ ಮಧ್ಯದಲ್ಲಿ ಪ್ರಚಂಡವಾದ ಧಾರ್ಮಿಕ ಸಾಮಾಜಿಕ ಆಂದೋಲನದ ಪುರಸ್ಕರ್ತನಾಗಿ ಶ್ರೇಷ್ಠ ಮಾನವತಾವಾದಿಯಾಗಿ ಪರಿಣಮಿಸಿದ

ಜಾತಿ, ಮತ, ಪಂಥಗಳು, ಧರ್ಮಶಾಸ್ತ್ರಗಳು ಮಾನವೀಯ ಸಮರ್ಥತೆಗೆ ತೊಡಕಾಗಿ ಪರಿಣಮಿಸಿದುದನ್ನು ಕಂಡ ಬಸವಣ್ಣ ಅವುಗಳ ವೈಷಮ್ಯವನ್ನು ತೊಡೆದು-

ಹಾಕುವ ಕ್ರಾಂತಿಯನ್ನು ಕೈಕೊಂಡ. ಕ್ಲಿಷ್ಟವಾದ ಪುಡಿವಂತರ ಭಾಷೆಯಲ್ಲಿ
ಹುದುಗಿದ ಧಾರ್ಮಿಕ ತತ್ವಗಳನ್ನು ಜನಸಾಮಾನ್ಯರಿಗಾಗಿ ಕನ್ನಡಿಸಿದ. ತಾತ್ವಿಕ
ಜಟಿಲತೆಯನ್ನು ಅಲ್ಲಗಳೆದು ಜನ ಸಾಮಾನ್ಯರಿಗೆ ಸುಗಮವಾದ ಹಾದಿಯನ್ನು
ಹಾಕಿಕೊಟ್ಟ ಬಸವಣ್ಣನಿಂದ ಜನತಾಧರ್ಮವು ರೂಪುಗೊಂಡಿತು. ಧಾರ್ಮಿಕ
ವ್ರತಾಚರಣೆಗಳ ಬಾಹ್ಯ ಕ್ರಿಯೆಯಲ್ಲಿ ತೊಡಗಿದವರಿಗೆ ಅಂತರಂಗಶುದ್ಧಿಯನ್ನು
ಬೋಧಿಸಿ ಅವರಲ್ಲಿ ಅಂತರಂಗಶುದ್ಧಿಯಿರುವವರನ್ನೆಲ್ಲ ಒಂದುಗೂಡಿಸಿದ. ಅಸಂಖ್ಯ
ದೇವತೆಗಳ ಉಪಾಸನೆಯಲ್ಲಿ ತೊಡಗಿ ಪಂಗಡ ಪಂಗಡವಾದಿದ್ದ ಜನತೆಗೆ ಏಕದೇವೋ-
ಪಾಸನೆಯನ್ನು ಬೋಧಿಸಿ ಅವರಲ್ಲಿ ಸಾಮರಸ್ಯವನ್ನು ತಂದ. ಯಜ್ಞಯಾಗಾದಿಗಳಿಂದ
ರೂಢವಾಗಿದ್ದ ಹಿಂಸಾಕೃತ್ಯವನ್ನು ಖಂಡಿಸಿ ಕರುಣೆ, ಮಾನವೀಯಪ್ರೇಮಗಳ
ಸಂದೇಶದಿಂದ ಮಾನವರಲ್ಲಿ ಮಾನವತೆ-ಬೆಳೆಯುವಂತೆ ಮಾಡಿದ. ಧರ್ಮದ
ನೆವದಿಂದ ಅವಸಿಗಳಾದ ಭಿಕ್ಷಾವೃತ್ತಿಯನ್ನು ಅನುಸರಿಸಿ ಇಲ್ಲವೆ ಶೋಷಕರಾಗಿ
ಸಾಮಾಜಿಕ ಆರ್ಥಿಕರಂಗಗಳಲ್ಲಿ ವೈಷಮ್ಯವನ್ನುಂಟುಮಾಡಿದ ಪರಿಸ್ಥಿತಿಯನ್ನು ಅಲ್ಲ-
ಗಳೆದು ಎಲ್ಲರೂ ಸತ್ಯ ಶುದ್ಧ ಕಾಯಕದಿಂದ ಬಾಳಬೇಕು. ಅರೊಬ್ಬರಿಗೂ ಇನ್ನೊ-
ಬ್ಬರ ದುಡಿಮೆಯ ಮೇಲೆ ಚರಿತಾರ್ಥ ಸಾಗಿಸುವ ಅಧಿಕಾರವಿಲ್ಲ. ಜಂಗಮರೂ ಕಾಯ
ಕದಲ್ಲಿ ತೊಡಗಬೇಕು. -ಎಂಬ ಸಂದೇಶವನ್ನು ಸಾರಿ ತಾನೇ ಸ್ವತಃ ಕಾರ್ಯದಲ್ಲಿ
"ಕಾಯಕವೇ ಕೈಲಾಸ" ಎಂಬ ಸೂತ್ರವನ್ನು ಅಂದಿನ ಜನತೆಯಲ್ಲಿ ರೂಢಿಸಿದ.
ಮರಣದ ನಂತರ ಸ್ವರ್ಗ ನರಕಗಳ ಕಲ್ಪನೆಯಿಂದ ಇಹದ ಬಾಳನ್ನು ಹಡಗೆಡಿಸಿದ ಸನ್ನಿ
ವೇಶದಿಂದಾಗಿ ಜನತೆಯಲ್ಲಿ ಅಜ್ಞಾನ, ಮೌಢ್ಯಗಳು ನೆಲಸಿದ್ದವು. ಜನತೆಯ ಇಂತಹ
ಅಜ್ಞಾನ, ಮೌಢ್ಯಗಳನ್ನು ಹೊಡೆದೋಡಿಸುವ ಕಾಯಕದಲ್ಲಿ ಬಸವಣ್ಣ ಮಗ್ನನಾದ.
ಇಹವೆಂಬುದು ಕರ್ತಾರನ ಕಮ್ಮಟ, ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರು' ಎಂಬ
ಸೂತ್ರದಿಂದ ಅಂದಿನ ಜನತೆಯಲ್ಲಿ ವಿದ್ಯುತ್ಸಂಚಾರವಾಗಿಸಬೇಕು. ದೇವಲೋಕ,
ಮರ್ತ್ಯಲೋಕಗಳು ಬಹು ದೂರ ಇಲ್ಲ. ಇಹದ ಬಾಳಿನಲ್ಲಿಯೇ ಸದಾಚಾರ ಸದ್ಭಕ್ತಿಗಳಿಂದ
ಸ್ವರ್ಗವನ್ನು, ದುರಾಚಾರ ಡಂಭಾಚಾರಗಳಿಂದ ನರಕವನ್ನು ಸೃಷ್ಟಿಸಬಹುದೆಂಬ
ಬಸವಣ್ಣ ಹೇಳಿದ ಮಾತು ಅಂದಿನ ಜನತೆಗೆ ಹೊಸ ಹಾದಿಯ ದೀಪವಾಯಿತು.
ಜನ್ಮದಿಂದ, ವೃತ್ತಿಯಿಂದ ಯಾರೂ ಮೇಲು-ಕೀಳು ಅಗಲಾರರು ಎಂಬ ಸಂದೇಶದಿಂದ
ಅಂದಿನ ಜನತೆಯಲ್ಲಿಯ ಸಾಮಾಜಿಕ ವೈಷಮ್ಯವನ್ನು ಪ್ರತಿಭಟಿಸುವುದು ಸಾಧ್ಯ-
ವಾಯಿತು. ಅಂತರಂಗಶುದ್ಧಿ, ಭಕ್ತಿಪ್ರೇಮ, ವಿನಯಗಳಿಂದ ಜನತೆಯಲ್ಲಿ ಬಾಂಧವ್ಯ-
ವನ್ನು ಬಲಿಸುವುದು ಬಸವಣ್ಣನಿಗೆ ಆಗ ಸಾಧ್ಯವಾಯಿತು. ಮಾನವರಲ್ಲಿಯ ಕೃತಕ
ಅಂತಸ್ತುಗಳನ್ನು ಅಲ್ಲಗಳೆದು ಅವರಲ್ಲಿ ಸಮಾನತೆಯನ್ನು ಮೂಡಿಸುವ ಕಾರ್ಯದಲ್ಲಿ
ಬಸವಣ್ಣ ಅಂದು ಸಫಲತೆ ಪಡೆದ. ಪರಮಾತ್ಮನ ಪಿತೃತ್ವವನ್ನು ಎಲ್ಲರೂ ಒಪ್ಪಿದಾಗ
ಮಾನವರಲ್ಲಿ ಬಂಧುತ್ವದ ಕಲ್ಪನೆಯು ಬಂಧುರವಾಗುವುದು. ಅದುದರಿಂದ ಬಸವಣ್ಣ
ಕೂಡಲ ಸಂಗಮದೇವನೊಬ್ಬನೇ ಪರಮಾತ್ಮನೆಂಬ, ಅತನು ಎಲ್ಲರ ತಂದೆ ಯೆಂಬ



ಶ್ರದ್ಧೆಯನ್ನು ತನ್ನಲ್ಲಿ ಬಲಿಸಿ ಕೊಂಡು ಇತರರಲ್ಲಿಯೂ ಅದನ್ನು ರೂಢಿಸಿ ಅಂದು
ಸಾಮಾಜಿಕ ಬಾಂಧವ್ಯವನ್ನು ಸದೃಢಗೊಳಿಸಿದ. ಧರ್ಮಶಾಸ್ತ್ರಗಳ ಪ್ರಮಾಣಕ್ಕಿಂತ-
ವ್ಯಕ್ತಿಯ ಹೃದಯಾಂತರಾಳದ ಭಾವನೆಗೆ, ಅನುಭವಕ್ಕೆ ಪ್ರಾಶಸ್ತ್ಯವನ್ನು ಬಸವಣ್ಣ
ತಂದುಕೊಟ್ಟ, ಎಲ್ಲರೂ ಅಧ್ಯಾತ್ಮಿಕ ಅನುಭವವನ್ನು ಎಲ್ಲರೊಂದಿಗೆ ವಿನಿಯೋಗಿಸುವ
ದೃಷ್ಟಿಯಿಂದ ಅನುಭವ ಮಂಟಪವನ್ನು ಸ್ಥಾಪಿಸಿದ. ಎಲ್ಲರಿಗೂ ಎಲ್ಲಾ ಮುಕ್ತದ್ವಾರ-
ವಿತ್ತು. ವಿವಿಧ ಜಾತಿಗಳ, ವೃತ್ತಿಗಳ, ಅಂತಸ್ತುಗಳ ಜನರು ಸದ್ಭಕ್ತಿ, ಸದಾಚಾರ-
ಗಳಿಂದ ಏಕೀಕೃತರಾಗಿ ಅಲ್ಲಿ ಸೇರುತ್ತಿದ್ದರು. ಮಾನವನ ಅರ್ಧಭಾಗವಾದ ಸ್ತ್ರೀಯನ್ನು
ಹಿಂದಿನ ಧರ್ಮಶಾಸ್ತ್ರಗಳು, ಸಮಾಜ ವ್ಯವಸ್ಥೆಗಳು ಅಲಕ್ಷಿಸಿದ್ದವು. ಸ್ತ್ರೀಗೆ ಧಾರ್ಮಿಕ
ರಂಗದ ಸೌಲಭ್ಯವನ್ನು ಅಲ್ಲಗಳೆಯಲಾಗಿತ್ತು. ಸ್ತ್ರೀಯ ಸುಪ್ತಶಕ್ತಿಗಳ ವಿಕಾಸಕ್ಕೆ
ಅವಕಾಶವಿರಲಿಲ್ಲ. ಬಸವಣ್ಣ ಧಾರ್ಮಿಕ ಸಾಮಾಜಿಕ ರಂಗಗಳಲ್ಲಿ ಸ್ತ್ರೀಗೆ ಸಮಾನತೆಯ
ಅವಕಾಶವನ್ನು ಒದಗಿಸಿಕೊಟ್ಟ. ಇದರಿಂದಾಗಿ ಅಂದು ಮಹಿಳಾ ಜಾಗೃತಿಯು ಭರ-
ದಿಂದ ಸಾಗಿತು. ಅನೇಕ ವಚನಕಾರ್ತಿಯರು, ಉನ್ನತಮಟ್ಟದ ಶರಣೆಯರು ಆಗ
ಅನುಭವಮಂಟಪದಲ್ಲಿ ಪಾಲುಗೊಂಡರು.

ಅಂದುಮಾನವೀಯ ಮೌಲ್ಯಗಳನ್ನು
ಬಸವಣ್ಣನ ಭೋಧನೆ-ಸಾಧನೆಗಳಿಂದಾಗಿ ಅಂದುಮಾನವೀಯ ಅನುಭವದ ಹಿರಿಮೆಯನ್ನು ಸಾಪ್ಥಿ-
ವರ್ಧಿಸುವುದು ಸಾಧ್ಯವಾಯಿತು. ಮಾನವೀಯ ಅನುಭವದ ಹಿರಿಮೆಯನ್ನು ಬಸವಣ್ಣನ ಕ್ರಾಂತಿಯು ಕತ್ತ
ಸುವ ದಿಸೆಯಲ್ಲಿ ಆಗ ರೂಢವಾಗಿದ್ದ ತೊಡಕುಗಳನ್ನು ಬಸವಣ್ಣನ ಕ್ರಾಂತಿಯು ಕತ್ತ
ರಿಸಿ ಹಾಕಿತು. ಬಸವಣ್ಣನಿಂದ ರೂಪಿತವಾದ ಜನತಾ ಧರ್ಮದಿಂದಾಗಿ ಪುಸ್ತಕ
ಪಾಂಡಿತ್ಯದ ಸಂಕುಚಿತತನದ ದರ್ಪಕ್ಕೆ ಆಗ ಅವಕಾಶವುಳಿಯಲಿಲ್ಲ. ಧಾರ್ಮಿಕ
ಕಟ್ಟಳೆಗಳಿಗೆ ಪ್ರತಿಯಾಗಿ ವ್ಯಕ್ತಿಯ ವಿಚಾರ ಸ್ವಾತಂತ್ರ್ಯವನ್ನು ಬಸವಣ್ಣ ಸಮರ್ಥಿ
ಸಿದ. ಅನುಭವ ಮಂಟಪದಲ್ಲಿ ಸೇರುತ್ತಿದ್ದ ವಿವಿಧ ವೃತ್ತಿಯ, ಅಂತಸ್ತಿನ ಶರಣರೆಲ್ಲ
ಸರ್ವಸಮಾನ ಭಾವನೆಯಿಂದ ಸ್ವತಂತ್ರ ರೀತಿಯಿಂದ ತಂತಮ್ಮ ವಿಚಾರಗಳನ್ನು ಮಂಡಿ
ಸುತ್ತಿದ್ದರು. ಹಳೆಯ ಕಟ್ಟಳೆಗಳಿಗೆ ಪಕ್ಕಾಗದೆ ಸ್ವತಂತ್ರ ದೃಷ್ಟಿಯಿಂದ ವಿಚಾರ
ಮಾಡಲು ಅಗ ಜನತೆಗೆ ವಿಪುಲ ಅವಕಾಶ ದೊರೆಯಿತು. ಇಂತಹ ಸ್ವತಂತ್ರ
ವಿಚಾರದ ಫಲವಾಗಿಯೇ ಬಸವಣ್ಣ ಹೊಸ ಕ್ರಾಂತಿಯನ್ನು ಮೂಡಿಸಲು ಮುಂದೆ
ಬಂದ. ಬಸವಪೂರ್ವದ ಪರಿಸರದಲ್ಲಿ ಮನಸ್ಸಿನ ಮುಕ್ತದ್ವಾರ ಸಾಧ್ಯವಾಗದಂತಹ ಬಗೆ
ಬಗೆಯ ಕಟ್ಟಳೆಗಳನ್ನು ಪ್ರತಿಭಟಿಸಿದ ಧಾರ್ಮಿಕ ಸಾಮಾಜಿಕ ರಂಗಗಳಲ್ಲಿ ಎಲ್ಲರಿಗೂ
ಮುಕ್ತದಾರ. ಎಲ್ಲರಿಗೂ ಸಮಾನ ಅವಕಾಶ ಎಂಬ ನವೀನ ಪಂಥವೊಂದು ಬಸವಣ್ಣ
ನಿಂದಾಗಿ ಅಗ ರೂಢಿಯಲ್ಲಿ ಬಂದಿತು. ಅಂತೆಯೇ ಮಾನವತಾ ವಾದದ ಗುರಿಯನ್ನು
ಸಾಧಿಸುವಲ್ಲಿ ಬಸವಕ್ರಾಂತಿಯು ಸಫಲತೆ ಪಡೆಯಿತು.

'ಪ್ರಗತಿ' ಎಂಬ ಪದವನ್ನು ನಾವು ಪುನಃ ಬಳಸುವುದುಂಟು. ಸಿಂಧುಸಂಸ್ಕೃ-
ತಿಯ, ವೈದಿಕ ಸಂಸ್ಕೃತಿಯ ಕಾಲದಿಂದ ನಾವು ಪ್ರಗತಿಪರರಾಗಿದ್ದೇವೆ, ಎಂಬ ಮಾತೂ

ಬರುತ್ತಿದೆ ತರ್ಕಬದ್ಧವಾಗಿ, ನ್ಯಾಯ ಸಮ್ಮತವಾಗಿ ಮುಂದುವರಿದಾಗ ಮಾತ್ರ ಪ್ರಗ-
ತಿಯು ಸಾಧನೆಯಾಗಿದೆ ಎನ್ನಬಹುದು. ಮಾನವನ ವಿಚಾರ-ಆಚಾರಗಳಲ್ಲಿ ಶಾಸ್ತ್ರಗಳ,
ಸಂಘಟಿತ ಧರ್ಮಸಂಸ್ಥೆಗಳ ಕಟ್ಟಳೆಗಳೇ ಪ್ರಧಾನವಾದ ಪ್ರಭಾವವನ್ನು ಬೀರುವ ಸನ್ನಿ-
ವೇಶಗಳಲ್ಲಿ ಮಾನವನ ಪ್ರಗತಿಗೆ ಅವಕಾಶ ದೊರೆಯುವುದು ಕಠಿಣವಾಗುತ್ತಿದೆ.
ಏಕೆಂದರೆ ಅಂತಹ ಕಟ್ಟಳೆಗಳಿಗೆ ತರ್ಕವಾಗಲಿ, ನ್ಯಾಯಸಮ್ಮತವಾದ ದೃಷ್ಟಿಯಾಗಲಿ
ತಳಹದಿಯಾಗಿರುವುದು ಕಂಡುಬಂದಿಲ್ಲ. ಮಾನವರಲ್ಲಿಯ ಸಮಾನತೆಯನ್ನೇ ಅಲ್ಲಗಳೆ
ಯುವ ಸಾಂಪ್ರದಾಯ ಕಟ್ಟಳೆಗಳು ಅತಿರೇಕಕ್ಕೆಳೆದಾಗ ಬಸವಣ್ಣನಂತಹ ಮಾನವತಾ
ವಾದಿಗಳ ಉದಯ ಅವಶ್ಯಕವಾಗುತ್ತಿದೆ. ಇಂತಹ ಅವಶ್ಯಕತೆಯನ್ನು ತುಂಬಿಕೊಡುವ
ಕಾರ್ಯದಲ್ಲಿ ಬಸವಣ್ಣನ ಬೋಧನೆ-ಸಾಧನೆಗಳು ಫಲಪ್ರದವಾಗಿವೆ ಸಕಲ ಮಾನ-
ವರಿಗೂ ನ್ಯಾಯ ದೊರೆಯಬೇಕೆನ್ನುವ ದೃಷ್ಟಿಯಿಂದ ವಂಚಿತವಾದ ಸಮಾಜದಲ್ಲಿ
ಕೆಲವೊಂದು ಪಟ್ಟಭದ್ರರು ಸಂಪತ್ತಿನ ಅಧಿಕಾರದ ಅನುಕೂಲತೆಗಳ ಗುತ್ತಿಗೆ ವಹಿಸು
ತ್ತಾರೆ ಉಳಿದವರನ್ನು ಜಾತಿಯ, ವೃತ್ತಿಯ, ಲಿಂಗದ, ಸಂಸ್ಕಾರದ ಭೇದದಿಂದ
ಅವರಿಗೆ ಮಾನವೀಯವಾಗಿ ದೊರೆಯಬೇಕಾದ ಅವಕಾಶಗಳಿಂದ ದೂರವಿಡುತ್ತಾರೆ.
ಹಾಗೆ ಮಾಡುವುದು ತರ್ಕಬದ್ಧವೂ ನ್ಯಾಯಸಮ್ಮತವೂ ಅಲ್ಲ. ಅಂತೆಯೇ ಆ ಬಗೆಯ
ಸನ್ನಿವೇಶಗಳನ್ನು ಪ್ರಗತಿಯೆಂದು ಕರೆಯಲಾಗದು ಬೇಕಾದರೆ 'ವಿಗತಿ' ಎಂದು ಹೇಳ
ಬಹುದು ಈ ಬಗೆಯ 'ವಿಗತಿ' ತಲೆದೋರಿದಾ ಬಸವಣ್ಣ ಮಾನವೀಯ ಮೌಲ್ಯ
ಗಳ ಕೈವಾರಿಯಾಗಿ ಹೋರಾಟ ಕೈಕೊಳ್ಳಬೇಕಾಯಿತು. ಸಾಮಾಜಿಕ ಪ್ರಗತಿಯೆಂದು
ಸಾಮಾಜಿಕ ವ್ಯವಸ್ಥೆಯನ್ನು ಕುಂಠಿತಗೊಳಿಸುವುದು ಸರಿಯಾಗಿರಲಾರದು. ಬಸವಣ್ಣ
ಆರಂಭಿಸಿದ ಆಂದೋಲನದಲ್ಲಿ ಸಾಮೂಹಿಕ ಪ್ರಗತಿಯು ವ್ಯಕ್ತಿ ವಿಕಾಸಕ್ಕೆ ಪೋಷಕ-
ವಾಗುವ ಬಗೆಯಲ್ಲಿ ಮೂಡಿ ಬಂದಿತು. ಬೋಧೆಯೊಂದು ಉದಾತ್ತವಾದರೆ ಸಾಲದು.
ಅದನ್ನು ಸಹಜವಾಗಿ ಸಾಮಾಜಿಕ ವ್ಯವಸ್ಥೆಯಲ್ಲಿ ರೂಢಿಸುವ ವ್ಯವಹಾರ್ಯ ಸಂಘ
ಟನೆಯೂ ಬೇಕು. ಈ ದಿಸೆಯಲ್ಲಿ ಬಸವಣ್ಣನ ಕ್ರಾಂತಿಯು ಮಹತ್ವಪೂರ್ಣವಾಗಿದೆ.
ಮಾನವತಾ ವಾದದ ಗುರಿಯನ್ನು ಸಾಧಿಸುವ ಕ್ರಮವನ್ನು ಪ್ರತಿಪಾದಿಸುವ ಸಂದರ್ಭ
ದಲ್ಲಿ Sir Julian Huxley ಅವರ ಉಕ್ತಿಯೊಂದು ಹೀಗಿದೆ

Religion today is imprisoned in a theistic trame of
ideas, compelled to operate in the unrealities of a dualistic
world. In the unitary Lumanistic frame, it requires a new
look and a new freedom. With the aid of one new vision it has
the opportunity of escaping from the theistic impass of playing
its proper role in the real world of unitary existence.

ದೇವರನ್ನು ಕುರಿತು ಅದ್ಭುತ-ಕಲ್ಪನೆಯಲ್ಲಿ ಧರ್ಮವೇ ಸೆರೆಯಾಳಾ-
ದಂತಾಗುತ್ತಿದೆ. ಆಗ ಧಾರ್ಮಿಕ ಲೋಕವು ವ್ಯವಹಾರವಿಲೋಕ ಎಂಬ ದ್ವಂದ್ವದ

ವಾಸ್ತವತೆಯು ಪ್ರಬಲವಾಗುತ್ತಿದೆ. ಸಮಗ್ರತೆಯನ್ನು ಸಮಾನತೆಯನ್ನು ಸಮರ್ಥಿಸುವ ಮಾನವತಾವಾದಿಯ ಹೊಸ ದೃಷ್ಟಿ ಹೊಸ ಸ್ವಾತಂತ್ರ್ಯ ಮೂಡಿ ಬರುತ್ತಿದೆ. ಮಾನವತಾವಾದಿಯ ಹೊಸ ದೃಷ್ಟಿಯಿಂದಾಗಿ ಧರ್ಮವು ದೈವತ್ವದ ಅದ್ಭುತ ಕಲ್ಪನೆಯ ಸೆರೆಯಿಂದ ಮುಕ್ತವಾಗಿ ವಾಸ್ತವ ಲೋಕದಲ್ಲಿ ಸಮಗ್ರತೆಯನ್ನು ಸಮಾನತೆಯನ್ನು ಸಾಧಿಸುವ ಕಾರ್ಯದಲ್ಲಿ ಫಲಪ್ರದವಾಗುತ್ತಿದೆ. ಬಸವಣ್ಣನ ಮಾನವತಾವಾದವು ಈ ಬಗೆಯದಾಗಿತ್ತು ಆ ಕಾಲದಲ್ಲಿ ಬಂಧನಕ್ಕೊಳಗಾಗಿದ್ದ ಧರ್ಮವನ್ನು ಸ್ವತಂತ್ರಗೊಳಿಸಿದ, ಇಲ್ಲಿ ಸಲ್ಲುವವರು ಅಲ್ಲಿ ಸಲ್ಲುತ್ತಾರೆಂದು ಹೇಳಿ ಧರ್ಮ ವ್ಯವಹಾರಗಳ ದ್ವಂದ್ವವನ್ನು ನೀಗಿದ. ಜನತೆಗೆ ಹೊಸ ದೃಷ್ಟಿಯನ್ನು, ಹೊಸ ಸ್ವಾತಂತ್ರ್ಯವನ್ನು ತಂದುಕೊಟ್ಟ. ಮಾನವನ ಸಮಗ್ರತೆಯನ್ನು ಸಮಾನತೆಯನ್ನು ಅಂದು ರೂಢಿಸಿದ. ಈ ಹೊಸ ದೃಷ್ಟಿ ಹೊಸ ಸ್ವಾತಂತ್ರ್ಯಗಳು ಧಾರ್ಮಿಕರಂಗದಲ್ಲಿ, ಸಾಮಾಜಿಕ ವ್ಯವಸ್ಥೆಯಲ್ಲಿ, ವ್ಯಕ್ತಿಗಳ ವಿಕಾಸದಲ್ಲಿ ಅಂಕುರಿಸಿದರ ಸ್ಪಷ್ಟವಾದ ರೇಖೆಗಳನ್ನು ಶಿವಶರಣರ ವಚನಗಳಲ್ಲಿ ಕಾಣಬಹುದಾಗಿದೆ. ವಚನಗಳ ವಿವರವಾದ ಅವಲೋಕನದಿಂದ ಅಲ್ಲಿ ಮೂಡಿ ಬಂದಿರುವ ಮಾನವೀಯ ಮೌಲ್ಯಗಳ ಸಮರ್ಥನೆಯನ್ನು ನಾವು ಅರಿತುಕೊಳ್ಳಬಲ್ಲೆವು.

ಮಾನವನನ್ನು ಹೆಚ್ಚು ಸತ್ಯವಾದ ಬಗೆಯಲ್ಲಿ ಮಾನವನನ್ನಾಗಿ ಮಾಡುವ ಮಾನವತಾವಾದಿಯ ಗುರಿಯನ್ನು ಮಾನವನನ್ನು ದಿವ್ಯಜೀವನದಪಾಲುಗಾರನನ್ನಾಗಿ ಮಾಡುವ ಅನುಭಾವಿಯ ಗುರಿಯನ್ನು ಏಕಕಾಲಕ್ಕೆ ಸಾಧಿಸಿದ ಪುಣ್ಯಪುರುಷ ಬಸವಣ್ಣ.

## ಕಾಯಕ

ನಾನು ಆರಂಬವ ಮಾಡುವೆನಯ್ಯಾ ಗುರುಪೂಜೆಗೆಂದು,
ನಾನು ಬೆವಹಾರ ಮಾಡುವೆನಯ್ಯಾ ಲಿಂಗಾರ್ಚನೆಗೆಂದು;
ನಾನು ಪರಸೇವೆಯ ಮಾಡುವೆನಯ್ಯಾ ಜಂಗಮ ದಾಸೋಹಕ್ಕೆಂದು
ನಾನಾವಾವ ಕರ್ಮಂಗಳ ಮಾಡಿದವರೆಯೂ
ಆ ಕರ್ಮ ಫಲಭೋಗವ ನೀ ಕೊಡುವೆಯೆಂಬುದ ನಾನು ಬಲ್ಲೆನು
ನೀ ಕೊಟ್ಟ ದ್ರವ್ಯವ ನಿಮಗಲ್ಲದೆ ಮತ್ತೊಂದು ಕ್ರೀಯ ಮಾಡೆನು;
ನಿಮ್ಮ ಸೊಮ್ಮಿಂಗೆ ಸಲಿಸುವೆನು, ನಿಮ್ಮಾಣೆ- ಕೂಡಲ ಸಂಗಮದೇವಾ



# ದೈವ : ಅಣ್ಣನ ಕಣ್ಣಿನಲ್ಲಿ

—ಡಾ॥ ಸಾ. ಶಿ. ಮರುಳಯ್ಯ

ಅನುಭವಕ್ಕೂ (experience), ಅನುಭಾವಕ್ಕೂ (mysticism) ರಚನೆಯಲ್ಲಿ ಹೆಚ್ಚು ವ್ಯತ್ಯಾಸ ಇಲ್ಲ, ಆದರೆ ಅರ್ಥದಲ್ಲಿ ಭೂಮಿ ಆಕಾಶಗಳಷ್ಟು ಅಂತರ ಇದೆ ಒಂದು ಲೋಕಕ್ಕೆ ಸಂಬಂಧಿಸಿದ್ದು, ಮತ್ತೊಂದು ಪರವನ್ನು ಕುರಿತದ್ದು ; ಒಂದು ಸಾರ್ವತ್ರಿಕ ಸಂಭಾವ್ಯವಾದರೆ ಮತ್ತೊಂದು ವೈಯಕ್ತಿಕ ಸಂಸಿದ್ಧಿ ಒಂದು ಮಾತಿಗೆ ನಿಲುಕುವಂಥದು, ಮತ್ತೊಂದು ನಾದ ಬಿಂದು ಕಳಾತೀತವಾದದ್ದು ಒಂದು ಲೋಕ ಪರವಾದ ಆಗು ಹೋಗುಗಳ ದಾಖಲೆ, ಮತ್ತೊಂದು ಅಧ್ಯಾತ್ಮ ಪರವಾದ ಅನಿರ್ವಚನೀಯ ಶ್ರೀನೆಲೆ! ಒಂದರದು ಸಾಧನೆ ಮತ್ತೊಂದರದು ಸಿದ್ಧಿ.

ಲೋಕವ್ಯವಹಾರದಲ್ಲಿ ತೊಡಗಿರುವ ಮಾನವನು ಪ್ರತಿನಿತ್ಯವೂ ಪಡೆಯುವ ಸುಖ ದುಃಖಗಳ ಮೊತ್ತವೆ ಅನುಭವ ; ಭಕ್ತನಾದವನು ಭಗವಂತನ ಬಗೆಗೆ ತಳೆವ ಪರಿಭಾವನೆಯೆ ಅನುಭಾವ. ಅನ್ಯರನ್ನು ನೋಡಿ ಕಲಿಯುವುದು ಅಥವಾ ತಾನೇ ಮಾಡಿದ ತಪ್ಪನ್ನು ತಿದ್ದಿ ಕೊಳ್ಳುವುದು ಅನುಭವವೆನಿಸಿದರೆ, ತನ್ನ ಇಷ್ಟ ದೈವ ಹೀಗಿರಬೇಕು, ಅಥವಾ ಹೀಗಿದ್ದಾನೆ ಎಂದು ರೂಪಿಸಿಕೊಳ್ಳುವುದು ಅನುಭಾವವೆನಿಸುತ್ತದೆ ದೈವಾಂಶ ಸಂಭೂತರಾದ ಮಹಾತ್ಮರು ಲೋಕ ಸಂಘರ್ಷದಿಂದ ಘಟನಾ ರೂಪದಲ್ಲಿ ಪಡೆಯುವುದು ಅನುಭವ, ಅವರೇ ಏಕಾಂತತೆಯಲ್ಲಿ ಸಮಾಧಿ ಸ್ಥಿತಿಯಲ್ಲಿ ಸಾಕ್ಷಾತ್ಕರಿಸಿ ಕೊಂಡ ಮಾನಸ ಮೂರ್ತಿಯೇ ಅನುಭಾವ. ಅವರು ತಮ್ಮ ಅನುಭವ ಜಾಗೃತವಾದಾಗ ಲೋಕದ ಡೊಂಕು ತಿದ್ದಿದರು ತಮ್ಮೊಳಗಿನ ಅನುಭಾವ ಎಚ್ಚೆತ್ತಾಗ ಭಗವದಾನಂದನನ್ನು ನಿರ್ವಚಿಸಿದರು, ಅದರಿಂದಾಗಿ ಅವರು ಲೋಕದ ಕಣ್ಣಿಗೆ ಎರಡು ರೂಪಗಳಲ್ಲಿ ಗೋಚರಿಸಿದರು.

ಒಂದು ಸಮಾಜ ಸುಧಾರಕನಾಗಿ ಮತ್ತೊಂದು ದೇವರ ಪ್ರತಿನಿಧಿಯಾಗಿ, ಅದು ಸಹಜವೂ ಹೌದು. ಏಕೆಂದರೆ ವ್ಯಕ್ತಿತ್ವ ದೊಡ್ಡದು ವ್ಯಕ್ತಿಗೆ ಒಂದು ಮುಖವಾದರೆ ವ್ಯಕ್ತಿತ್ವಕ್ಕೆ ನಾನಾ ಮುಖಗಳು. ಹರಿಯುವ ನೀರಿನಂತೆ, ಉರಿಯುವ ಜ್ಯೋತಿಯಂತೆ ದರ್ಶನ ಕೊಡುತ್ತದೆ ವ್ಯಕ್ತಿತ್ವ ಆದರೆ ಬಸವಣ್ಣನ ಬದುಕನ್ನು ಸೂಕ್ಷ್ಮವಾಗಿ ವೀಕ್ಷಿಸಿದರೆ ಈ ಭಿನ್ನತೆ ಅಷ್ಟಾಗಿ ಕಂಡುಬರುವುದಿಲ್ಲ. ಅನುಭವ ದರ್ಶಿಸಿದ ಕಡೆಯಲ್ಲೆಲ್ಲಾ ಅನುಭಾವಗಳೆರಡರಲ್ಲೂ ಅವನ ಏಕೀಭವಿಸಿ ನಿಂತಿದ್ದಾನೆ. ಅವನ ಬದುಕೇ ಒಂದು ಭವ್ಯ ಭಾವಗೀತೆ. ಅನಿಸಿದ್ದನ್ನು ಅನುವದಿಸಿ ಬಿಡುತ್ತಾನೆ ನಿಭಿಡೆಯಿಂದ. ಅವನು

ಜನಮನವನ್ನು ಓದುತ್ತಲೇ ಅನುಭವ ಅನುಭಾವಗಳನ್ನು ಅರ್ಥೈಸಿಕೊಂಡು ಹೋಗಿದ್ದಾನೆ.

"ಬಸವ ಬಾರಯ್ಯ ಮರ್ತ್ಯಲೋದೊಳಗೆ ಭಕ್ತರುಂಟೆ ಹೇಳಯ್ಯ ?" ಮತ್ತಾರೂ ಇಲ್ಲವಯ್ಯ, ಮತ್ತಾರೂ ಇಲ್ಲವಯ್ಯ, ಮತ್ತಾರೂ ಇಲ್ಲವಯ ನಾನೇ ಭಕ್ತನು ! ಮರ್ತ್ಯಲೋಕದೊಳಗಣ ಭಕ್ತರಿಲ್ಲರೂ ಜಂಗಮ ಲಿಂಗ ! ನೀನೆ ಅಯ್ಯ ಕೂಡಲ ಸಂಗಮದೇವ !"

ಹೀಗೆ ಮಾನವ ಹೃದಯದಲ್ಲಿ ಮಹಾದೇವನನ್ನೇ ಕಂಡ ಅಪೂರ್ವ ಅನುಭಾವಿ ಆತ. ಅವನಿಗೆ ತನ್ನ ಇಷ್ಟ ದೈವವಾದ ಕೂಡಲ ಸಂಗಮನಿಗಿಂತಲೂ ಮಿಗಿಲಾದ ದೈವ ಬೇರೆ ರೂಪದಲ್ಲಿ ದೊರೆಡೆಯಲ್ಲಿದೆ. ಅದಿರುವುದು ಕಡು ಬಡವನ ಗುಡಿಸಲಿನಲ್ಲಿ ; ಸದಾ ದುಡಿಯುತ್ತಿರುವ ಕರ್ಮಯೋಗಿಯಲ್ಲಿ ; ನುಡಿದಂತೆ ನಡೆವ ಮಹಾತ್ಮನಲ್ಲಿ ಅರೆದರೆ ಸುಣ್ಣವಾಗಿ ಬರೆದರೆ ಬಣ್ಣವಾಗುವ ಪುಣ್ಯಾತ್ಮನಲ್ಲಿ ; ಭಾಂಡ ಭಾಜನ (ಅಂತರಂಗ ಬಹಿರಂಗ) ಶುದ್ಧವಿರುವವನಲ್ಲಿ ; ಮಾಡುವ ನೀಡುವ ನಿಜಗುಣವುಳ್ಳಾತನಲ್ಲಿ ; ಸತ್ಯ ಪ್ರೇಮ ಅಹಿಂಸೆಗಳನ್ನು ಬಿತ್ತರಿಸಿದ ಪೂಜ್ಯನಲ್ಲಿ ; ಪರ ವಧುವನ್ನು ಮಹಾದೇವಿಯೆಂಬ ಸದಾಚಾರ ಸಂಪನ್ನನಲ್ಲಿ ; ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ಶರಣ ಶ್ರೇಷ್ಠನಲ್ಲಿ ; ವೈರಿಯೂ ಮೆಚ್ಚುವಂತಹ ವೀರನಲ್ಲಿ ; ಅಂಗನೆಯೂ ಮೆಚ್ಚುವಂತಹ ವ್ರತಿಯಲ್ಲಿ ; ಜಂಗಮ ಮೆಚ್ಚುವಂತಹ ಭಕ್ತನಲ್ಲಿ ; ಪರಧನ. ಪರ ಸತಿ, ಪರದೈವ ಇವುಗಳನ್ನೊಲ್ಲೆಯೆಂಬ ಹಾಗೂ ಲಿಂಗ ಜಂಗಮ ಒಂದೇ ಎಂಬ ಪ್ರಸಾದ ದಿಟವೆಂಬ ಛಲಗಾರನಲ್ಲಿ ; ಕಾಯದ ಕಳವಳಕ್ಕಂಜದೆ, ಉರಿ ಬರಲಿ, ಸಿರಿ ಬರಲಿ ಬೇಕು-ಬೇಡ ಎನ್ನದ ಸಮಾಧಾನಿಯಲ್ಲಿ ; ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಸಕಲರನ್ನು ಒಂದೇ ಎಂದು ತಿಳಿದು ನಡೆಸುವ, ಬೋಧಿಸುವ, ಉಚ್ಚ-ನೀಚ ಭಾವದ ಕೊಚ್ಚೆಯನ್ನು ತೊಳೆದು ಶುದ್ಧಿಗೈವ ಆ ಜಗತ್ ಜಲಗಾರನಲ್ಲಿ ; ಆರು ಮುನಿದು ನಮ್ಮನೇನ ಮಾಡುವರು ಎಂಬ ನಿಷ್ಠುರಿಯಲ್ಲಿ ; ದರ್ಪ ದೌರ್ಜನ್ಯಗಳಿಗೆ ಬಲಿಯಾಗದೆ ಧೈರ್ಯಕ್ಕಾಗಿ ದೇಹವನ್ನು ಸಮರ್ಪಿಸಲು ಸಿದ್ಧನಿರುವ ಸ್ವಾಭಿಮಾನದ ಶಿಶುವಿನಲ್ಲಿ ; ನೆಲವೊಂದೆ ಹೊಲಗೇರಿ–ಶಿವಾಲಯಕ್ಕೆ. ಜಲವೊಂದೆ ಶೌಚಾಚಮನಕ್ಕೆ, ಕುಲವೊಂದೆ ತನ್ನ ತಾನರಿದವಂಗೆ, ಫಲವೊಂದೆ ಷಡುದರುಶನ ಮುಕ್ತಿಗೆ ಎಂಬುದನ್ನರಿತು ಅಸ್ಪೃಶ್ಯತೆಯ ಅರ್ಥವನ್ನೇ ಅರಿಯದ ಸರ್ವರಲ್ಲೂ ಸೋದರ ಭಾವವನ್ನುಳ್ಳ ನಿಷ್ಕಳ ನಿಜೈಕ್ಯನಲ್ಲಿ ; ಮುತ್ತಿನ ಹಾರದಂತೆ, ಮಾಣಿಕ್ಯದ ದೀಪ್ತಿಯಂತೆ, ಸ್ಫಟಿಕದ ಸಲಾಕೆಯಂತೆ, ಲಿಂಗವೂ ಮೆಚ್ಚಿ 'ಅಹುದವುದು' ಎನ್ನುವಂತೆ ನುಡಿವ ನಡೆವ ಒಡೆತನ ಉಳ್ಳವನಲ್ಲಿ ; ಸದಾಕಾಲವೂ 'ಸೋಹಂ' ಎನ್ನದೆ, 'ದಾಸೋಹಂ' ಎನ್ನುವ ವಿನಮ್ರ ಮೂರ್ತಿಯಲ್ಲಿ ; ಭಕ್ತನಾಗಿ ಭಕ್ತಿ ದಾಸೋಹ, ಯುಕ್ತನಾಗಿ



ಯುಕ್ತಿ ದಾಸೋಹ, ಐಕ್ಯನಾಗಿ ಮಮಕಾರ ದಾಸೋಹ-ಹೀಗೆ ಸರ್ವ ವಿಧದಲ್ಲೂ ದಾಸೋಹವನ್ನೇ ಆಹ್ವಾನಗೆಯ್ಯುವ ಅನುಭಾವಿಯಲ್ಲಿ ; ವಿಶ್ವಜಿತ, ಧನುಜಿತ, ಸರ್ವಜಿತ, ಸುತ್ರಾಮಜಿತ, ನೃಜಿತ, ಉರ್ವರಾಜಿತ, ಅಶ್ವಜಿತ, ಗೋಜಿತ, ಸ್ವರ್ಜಿತ, ಸುಸಂವೇದ್ಯ ವೇದಾನಾದಾತೀತ, ತುರೀಯ ಪರಮಾನಂದ, ನಿರವಯ, ಸೂರ್ಯಕೋಟಿ ಪ್ರಭೆಯ ಬೆಳಕಿನ ಸಹಸ್ರ ಕಿರಣದ ಅಗ್ರಪಟಲದ ಬೆಳಕು ಕಂಡವನಲ್ಲಿ ; ಘನ ಗಂಭೀರ ಮಹಾಘನದೊಳಗಿನ ಘನಕ್ಕೆ ಘನವಾದ ಅಂದರೆ ಬೆಳಗೊಣ ಬೆಳಗು ಮಹಾ ಬೆಳಗಿನಲ್ಲಿ ಬೆರೆದು ಬಯಲಾದವನಲ್ಲಿ. ಹಾಗಲ್ಲದೆ—

ಒಂದನಾಡ ಹೋಗಿ ಒಂಬತ್ತನಾಡುವ ಡಂಭಕನಲ್ಲಲ್ಲ ನಂಬದೆ ನಚ್ಚದೆ ಬರಿದೆ ಕರೆವ ಆಷಾಢಭೂತಿಯಲ್ಲಲ್ಲ, ನುಡಿದು ಹುಸಿವ, ನಡೆದು ತಪ್ಪುವ ಪ್ರಪಂಚಿಯಲ್ಲಲ್ಲ, ಕಾಮ ಹೇಮವ ಮರದ ನೆರಳಿನಲ್ಲಿದ್ದು ತನ್ನ ನೆರಳನರಸುವ ಅತೀ ಬುದ್ಧಿವಂತನಲ್ಲಲ್ಲ, ಅರಸನ ಕಂಡೊಡನೆಯೇ ತನ್ನ ತೊರೆಯದೆ ಜರೆಯದೆ ಶ್ವಾನನಂತೆ ಸುತ್ತುವನಲ್ಲಲ್ಲ, ಜ್ಯೋತಿವಿಡಿದು ಕತ್ತಲೆಯನ್ನರಸುವ ಪುರುಷನನ್ನು ಮರೆಯುವ ಪತಂಗದಲ್ಲಲ್ಲ, ಮರುಳು ಮಾನವನಲ್ಲ. ಹೀಗೆ ಅನುಭಾವಿ ಅಣ್ಣ ಅನುಭವದ ಅಡುಗೆ ಮಾಡಿ ನೀಡಿದ್ದಾನೆ.

---

**ಕಾಯಕ**

"ಹಸಿವಾದೊಡುಂಬುದನು, ಸತಿಯ ಸಂಭೋಗವನು
ಅನಾಗಿನೀ ಮಾಡೆಂಬವರುಂಟೆ? ಮಾಡುವುದು ;
ಮಾಡುವುದು ಮನಮುಟ್ಟಿ ; ಮಾಡುವುದು, ಮಾಡುವುದು
ತನುಮುಟ್ಟಿ ! ತನುಮುಟ್ಟಿ ಮನ ಮುಟ್ಟದಿರ್ದಡೆ
ಕೂಡಲಸಂಗಮ ದೇವನೇತರಲ್ಲಿಯೂ ಮೆಚ್ಚ !"

"ಉದಕದೊಳಗೆ ಬಯ್ಚಿಟ್ಟ ಬಯಕೆಯ ಕಿಚ್ಚಿನಂತಿದ್ದಿತ್ತು ;
ಸಸಿಯೊಳಗಣ ರಸದ ರುಚಿಯಂತಿದ್ದಿತ್ತು.
ನನೆಯೊಳಗಣ ಪರಿಮಳದಂತಿದ್ದಿತ್ತು.
ಕೂಡಲ ಸಂಗಮದೇವಾ, ನಿಮ್ಮ ನಿಲವು ಕನ್ನೆಯ ಸ್ನೇಹದಂತಿದ್ದಿತ್ತು."

# ಬುದ್ಧ ಮತ್ತು ಬಸವ

—ಶ್ರೀ ಟಿ. ಆರ್. ಮಹದೇವಯ್ಯ

ಲೋಕದಲ್ಲಿ ಅಧರ್ಮ, ಅನೀತಿ, ಅನಾಚಾರ, ದುರಾಚಾರ, ಪೌರುಷ ಹೀನತ್ವ ಮೊದಲಾಗಿ ಧರ್ಮಕ್ಕೆ ಚ್ಯುತಿ ಉಂಟಾದಾಗ ಲೋಕ ಕಲ್ಯಾಣಕರವಾದ ಭಗವತ್‌ಶಕ್ತಿಯು ಅವತರಿಸಿ, ಮಲಿನಗೊಂಡ ಮಾನವನ ಹೃದಯವನ್ನು ನಿರ್ಮಲಗೊಳಿಸಿ, ಧರ್ಮ, ನೀತಿ, ಮಾನವತೆಯನ್ನು ನೆಲೆಗೊಳಿಸುತ್ತದೆ. ಪ್ರಪಂಚದ ಇತಿಹಾಸದಲ್ಲಿ ಇಂಥ ದೇವಮಾನವರ ಅವತಾರಗಳು ಪರಂಪರೆಯಾಗಿ ಆಗಿಹೋಗಿವೆ. ಕ್ರಿ. ಶ. ಪೂರ್ವ ಆರನೆಯ ಶತಮಾನದಲ್ಲಿದ್ದ ಬುದ್ಧ, ಮತ್ತು ಕ್ರಿ. ಶ. ಹನ್ನೆರಡನೆಯ ಶತಮಾನದಲ್ಲಿದ್ದ ಬಸವ ಇವರಿಬ್ಬರೂ ಇಂಥಾ ಮಹಾ ಪುರುಷರ ಶ್ರೇಣಿಗೆ ಸೇರಿದವರು; ಮಾನವನ ಕಲ್ಯಾಣವನ್ನು ಸಾಧಿಸಿ, ವಿಶ್ವವನ್ನೇ ಬೆಳಗಿದ ಜಗಜ್ಯೋತಿಗಳು. ಪೂಜ್ಯ ಶ್ರೀ ಕುಮಾರಸ್ವಾಮಿಗಳು, ನವಕಲ್ಯಾಣ ಮಠ, ಧಾರವಾಡ ಇವರು ಇಂಗ್ಲೀಷು ಭಾಷೆಯಲ್ಲಿ ರಚಿಸಿರುವ "ಬುದ್ಧ ಮತ್ತು ಬಸವ" ಎಂಬ ಉದ್ಗ್ರಂಥದಲ್ಲಿ ಈ ಮಹಾಮಹಿಮರಿಬ್ಬರ ಜೀವನ, ಸಾಧನೆ ಮತ್ತು ಸಂದೇಶಗಳ ತುಲನಾತ್ಮಕ ವಿಮರ್ಶೆಯನ್ನು ಮನೋಜ್ಞವಾಗಿ ಮಾಡಿದ್ದಾರೆ. ಅದರ ''ಕ್ಷಣ ದರ್ಶನ'' ವನ್ನು ಈ ಲೇಖನದಲ್ಲಿ ಮಾಡಲಾಗಿದೆ, ಈ ಮಹಾಗ್ರಂಥದ ನನ್ನ ಕನ್ನಡ ಅನುವಾದವು ಧಾರವಾಹಿನಿಯಾಗಿ ''ಸಿದ್ಧಗಂಗಾ'' ತ್ರೈಮಾಸಿಕ ಸಂಚಿಕೆಗಳಲ್ಲಿ ಪ್ರಕಟಗೊಂಡಿದೆ.

ಈ ಮಹನೀಯರಿಬ್ಬರ ಕಾಲದಲ್ಲೂ ಸಮಾಜವು ರೋಗಗ್ರಸ್ತವಾಗಿದ್ದು, ಅರ್ಥವಿಲ್ಲದ ಮತಾಚರಣೆ ಮತ್ತು ಮೂಢ ನಂಬಿಕೆಗಳಿಂದುಂಟಾದ ನೈತಿಕ ದುರ್ಬಲತೆಯಿಂದ ಕೀಳು ಮಟ್ಟಕ್ಕಿಳಿದಿತ್ತು. ಮೇಲುಕೀಳೆಂಬ ಜಾತಿಗಳ ಅವಾಂತರದ ನೆಪದಲ್ಲಿ ಮೇಲೆಂಬುವರು, ಕೀಳೆಂಬುವರನ್ನು ಅನ್ಯಾಯವಾಗಿ ತಲೆಯೆತ್ತಗೊಡುತ್ತಿರಲಿಲ್ಲ. ಪವಿತ್ರ ಗ್ರಂಥಗಳು ಮತ್ತು ಅವುಗಳ ಅಧ್ಯಯನವು ಕೆಲವರಿಗೇ ಮೀಸಲಾಗಿದ್ದು, ಜನಸಾಮಾನ್ಯರಿಗೆ ಅವು ದುರ್ಲಭವಾಗಿದ್ದವು. ಉನ್ನತ ಧ್ಯೇಯಗಳ ಮತ್ತು ಅವುಗಳನ್ನು ಸ್ಥಾಪಿಸುವ ಮಾರ್ಗದರ್ಶಿಗಳಿಲ್ಲದೆ, ಮಾನವನ ಜೀವನವು ದೆಸೆಗೆಟ್ಟು ಅಡವಿಯಲ್ಲಿ ಅಲೆಯುವ ದಾರಿಹೋಕನಾಗಿತ್ತು. ಇವನ್ನೆಲ್ಲಾ ಹೋಗಲಾಡಿಸಿ ದಿವ್ಯ ಬೋಧೆಯನ್ನು ನೀಡುವ ಮಹಾನುಭಾವರ ಉದಯವು ಅಗತ್ಯವಿತ್ತು. ಅಂತಲೇ ಬುದ್ಧ, ಬಸವ ಭಗವಾನರು ಅವತರಿಸಿದರು.



ತನ್ನನ್ನು ಮೀರಿಸಿರುವ ಅಪಾರ ದೈವಶಕ್ತಿಯಲ್ಲಿ ನಂಬಿಕೆ, ಮತ್ತು ಅದರಲ್ಲಿ ಭಯ-ಭಕ್ತಿಯನ್ನು ತಾಳುವುದು ಮನುಷ್ಯನ ಸಹಜ ಪ್ರವೃತ್ತಿ. ಆ ಚೈತನ್ಯ ದರ್ಶನದಿಂದ ತನ್ನ ಉನ್ನತಿಯನ್ನು ಸಂಪಾದಿಸಲು ಮನುಷ್ಯನು ಯತ್ನಶೀಲನಾಗಿರುವನು. ಈ ದಿಶೆಯಲ್ಲಿ ಮಾರ್ಗದರ್ಶಿಗಳಾಗಿ ಮಹಾತ್ಮರು ಅವತರಿಸುವರು. ಮಾನವಾಕಾರದ ದೇವನಿದ್ದಾನೆ, ಅವನ ಮುಖಸ್ತುತಿ ಮಾಡಿದರೆ ಸರ್ಗಪ್ರಾಪ್ತಿ ಇತ್ಯಾದಿ ಮೂಢ ನಂಬಿಕೆ–ವಿಶ್ವಾಸಗಳಿಂದ ಅಂಧಾನುಕರಣೆ ಮಾಡು ಮನುಷ್ಯನು ಕರ್ತವ್ಯ ಪರಾಙ್ಮುಖನಾಗಿ,. ನ್ಯಾಯಬಾಹಿರನಾಗಿ; ನಡೆದು, ದುಷ್ಕೃತ್ಯಗಳನ್ನು ಮಾಡಿ ಶಿಕ್ಷೆಯಿಂದ ಪಾರಾಗಬಹುದೆಂದು ಭ್ರಮಿಸಿ. ಸಮಾಜದ ಕ್ಷೇಮಕ್ಕಿಂತ, ತನ್ನ ಸ್ವಂತ ಪಾಡೇ ಮುಖ್ಯವೆಂದು ಪರಮ ಸ್ವಾರ್ಥಿಯಾಗುವನು.

ಈ ಬಗೆಯ ದೌರ್ಬಲ್ಯಗಳನ್ನು ಹೋಗಲಾಡಿಸಿ, ಮಾನವನನ್ನು ರಕ್ಷಿಸುವುದೇ
ನೈಜವಾದ ಧರ್ಮ. ದೈವಭಕ್ತಿ ಮತ್ತು ನೀತಿ ಧರ್ಮಗಳಿಗೆ ನಿಕಟ ಸಂಬಂಧವಿದೆ.
ಸದ್ಗುಣಿಗಳು ಆತ್ಮಸಾಕ್ಷಿಯಾಗಿ ನಡೆದು ತಮ್ಮ ಬಾಳನ್ನು ಅಂದಗೊಳಿಸುತ್ತಾರೆ ;
ಎಲ್ಲಾ ಭಾರವನ್ನು ದೇವರ ಮೇಲೆ ಹಾಕಿ- ಕೈಕಟ್ಟಿ ಕುಳಿತುಕೊಳ್ಳದೆ, ಲೋಕ
ಸೇವೆಯನ್ನೆಸಗುತ್ತಾರೆ. ಮೂರ್ತಿ ವಿಗ್ರಹಗಳನ್ನು ಪೂಜಿಸಿ ಸ್ವರ್ಗ ಪ್ರತಿಫಲವನ್ನು
ಪಡೆಯಬಹುದೆಂಬ ಮೂಢನಂಬಿಕೆಯು ಮಾನವ ಪ್ರಗತಿಗೆ ಮಾರಕಪ್ರಾಯ.
ಅಚಲ ಶ್ರದ್ಧೆ, ನಿಷ್ಠೆ ಸಾಹಸ, ಧೀಶಕ್ತಿಯಿಂದ ನಿರಂತರವಾಗಿ ಆತ್ಮಾನುಸಂಧಾನ
ಮಾಡುತ್ತ ಮನೋದೌರ್ಬಲ್ಯಗಳನ್ನು ಧೀರತನದಿಂದ ತ್ಯಜಿಸಿ, ಮನಸ್ಸನ್ನು ಪರಿಶುದ್ಧ
ಪವಿತ್ರಗೊಳಿಸಬೇಕು. ಈ ಲೋಕದ ನಿಕಟಾಂಗವಾಗಿರುವ ಜೀವಿಯು ತನ್ನನ್ನು
ತಿದ್ದಿಕೊಂಡರೆ, ಲೋಕದ ಒಂದು ಭಾಗವನ್ನು ಅಷ್ಟುಮಟ್ಟಿಗೆ ತಿದ್ದಿದಂತೆಯೇ ಸರಿ.
ತನಗಿಂತಲೂ ಉನ್ನತವಾಗಿ ತನ್ನ ಪೀಳಿಗೆಯವರು ಬಾಳಲೆಂದು ಸಾಹಸ ಪಡುವವನೇ
ಸಾಧಕ ಜೀವಿ. ಪ್ರತಿಫಲಾಪೇಕ್ಷೆಯಿಲ್ಲದ ಕರ್ತವ್ಯ ನಿರತನಾಗಿರುವುದು ಅವನ ಸಹಜ
ಕ್ರಿಯೆ. ಅದೇ ಸಹಜ ಧರ್ಮ. 'ಸಮಾಜದ ಸಂತೋಷವೇ ನನ್ನ ಸುಗತಿ. ನಮ್ಮ
ಸಂತತಿಯವರ ನೆಮ್ಮದಿಯೇ ನನ್ನ ಮನೋರಥ ಸಿದ್ಧಿ ; ಮಾನವನನ್ನು ಒಂದು
ಗೂಡಿಸುವುದು ಭೀತಿಯಲ್ಲ–ಪ್ರೀತಿ ; ಸರ್ವಾತ್ಮತಾ ದೃಷ್ಟಿಯಿಂದ ನಡೆದರೇನೇ ವಿಶ್ವ
ದಲ್ಲಿ ಸುರಾಜ್ಯ ಸಂಸ್ಥಾಪನೆ ; ಯಾರೊಬ್ಬರ ಸಂತೋಷವನ್ನು ಮಾತ್ರವೇ ಬಯಸದೆ,
ಇಡೀ ಲೋಕದ ಲೇಸೇ ನನ್ನ ಧ್ಯೇಯ ; ದುಷ್ಕೃತ್ಯಗಳನ್ನು ನಾಶ ಮಾಡಬೇಕು ;
ಪ್ರೀತಿಯು ಪರಾಕಾಷ್ಠತೆಯಾಗಿರಬೇಕು ; ಅನಂತ ಶಕ್ತಿಯ ಅನುಸಂಧಾನ ಮಾಡ
ಬೇಕು.'' ಇವೇ ಮಾನವನಿಗೆ ಕಲ್ಯಾಣದಾಯಕವಾದ ಪವಿತ್ರ ಕರ್ತವ್ಯಗಳು.
ಜನಸೇವೆಯೇ ಜನಾರ್ದನನ ನಿಜವಾದ ಪೂಜೆ. ಇವೆಲ್ಲವುಗಳ ಸಾಧನೆಗೆ ನಮ್ಮ
ಪ್ರಜ್ಞೆಯನ್ನು ಪಳಗಿಸಿ, ಸಬಲಗೊಳಿಸುವ ಸಂಸ್ಕೃತಿಯೇ ಸುರಕ್ಷಕರವಾದ ಧರ್ಮ.

ಪ್ರಾಚೀನ ಯುಗದ ಬುದ್ಧ, ಮಧ್ಯಮ ಯುಗದ ಬಸವರಿಬ್ಬರೂ ಇಂತಹ ಧರ್ಮಪ್ರವರ್ತಕರು. ಇವರಿಬ್ಬರ ಕಾಲಗಳಿಗೆ ಶತಮಾನಗಳ ಅಂತರವಿದ್ದರೂ, ಅವರ ಮನೋಧರ್ಮದಲ್ಲಿ, ಪರಿಸ್ಥಿತಿಗನುಗುಣವಾಗಿ ಅವರು ತಾಳಿದ ಕ್ರಾಂತಿಕಾರಕ ಭಾವನೆಗಳಲ್ಲಿ ಸಮರೂಪದ ಲಕ್ಷಣಗಳಿವೆ. ಅವರು ಸಂತರು ಮತ್ತು ಪ್ರವಾದಿಗಳು. ಲೋಕ ಜೀವನದಲ್ಲಿ ವಿರಾಗನಾಗದೆ, ರಾಜನೀತಿಕೋವಿದನಾಗಿ ಇಹ-ಪರಗಳನ್ನು ಸಮನ್ವಯಗೊಳಿಸಿದವನು ಬಸವ. ಸರ್ವ ಸಂಗ ಪರಿತ್ಯಾಗ ಮಾಡಿ, ರಾಜ್ಯ, ಸಂಪತ್ತು, ಸತಿ, ಸತುರ ಭೋಗವನ್ನು ತ್ಯಜಿಸಿ, ಸತ್ಯದ ಅನ್ವೇಷಣಕ್ಕಾಗಿ ಸಂನ್ಯಾಸಿಯಾದವನು ಬುದ್ಧ. ಇವರೀರ್ವರ ವಿಲಕ್ಷಣ ವ್ಯಕ್ತಿತ್ವಗಳನ್ನು ಮತ್ತು ಅವರ ಧರ್ಮಗಳನ್ನು ತುಲನಾತ್ಮಕವಾಗಿ ಸಮಾಲೋಚಿಸುವುದು ಲಾಭದಾಯಕ.

ಕಪಿಲವಸ್ತುವೆಂಬ ರಾಜಧಾನಿಯಲ್ಲಿ ಶುದ್ಧೋದನ ಮಹಾರಾಜನಿಗೆ ಆಗರ್ಭ ಶ್ರೀಮಂತನಾಗಿ ಹುಟ್ಟಿ, ತೃಣಮಾತ್ರವೂ ಕೊರತೆಯನ್ನೇ ಕಾಣದೆ, ತನ್ನ ಏಕಮಾತ್ರ ಪುತ್ರ ಸತಿಯೊಡನೆ ಸ್ವರ್ಗಸುಖಿಯಾಗಿದ್ದ ಸಿದ್ಧಾರ್ಥ. ಜನ್ಮ-ಮೃತ್ಯು, ಜರೆ, ವ್ಯಾಧಿ, ದುಃಖ-ದೋಷಗಳ ಕಠೋರ ಸತ್ಯವು ಅವನಿಗೆ ಒಮ್ಮೆ ಮಾತ್ರ ಕಂಡ ತಕ್ಷಣವೇ, ಅತ್ಯಂತ ಕನಿಕರ ಪಟ್ಟು, ಜೀವಿತದ ಈ ಸಂಕಟಗಳಿಗೆ ಕಾರಣವನ್ನೂ ಮತ್ತು ಅವುಗಳ ನಿವಾರಣೆಯ ಮಾರ್ಗವನ್ನು ಕಂಡುಹಿಡಿಯಲು ಸತಿ-ಸುತ-ಸಂಸಾರ-ಸಂಪತ್ತುಗಳು ಪ್ರತಿಬಂಧಕಗಳೆಂದು ಪರಿಗಣಿಸಿ, ಸರ್ವಸಂಗಪರಿತ್ಯಾಗಮಾಡಿ, ಸಂನ್ಯಾಸಿಯಾಗಿ ಹೊರಟನು. ಆಗಿನ ಕಾಲದ ಮುಮುಕ್ಷುಗಳಂತೆ ತಪಸ್ಸನ್ನಾಚರಿಸಿದ; ಮಂತ್ರಶಕ್ತಿ ಔಪಾಸನೆ ಮುಂತಾದ ಸಾಧನೆಗಳಲ್ಲಿ ತೊಡಗಿದ. ಆದರೂ ಅವನ ಗತಿ ಕಾಣಲಿಲ್ಲ. ಅಲಸಿಕೆ ಆಯಾಸಗಳ ಪರವೆಯೇ ಇಲ್ಲದೆ, ನೈಸರ್ಗಿಕ ಘಟನೆಗಳ ಕಾರಣಗಳನ್ನರಸಿದನು. ಪ್ರಚಲಿತ ಮಾರ್ಗಗಳಲ್ಲಿ ಕೃತಕೃತ್ಯನಾಗದೆ, ಧೀರತೆಯಿಂದ ತನ್ನದೇ ಆದ ಸ್ವತಂತ್ರ ಮಾರ್ಗಗಾಮಿಯಾಗಿ, ಬೋಧಿಸತ್ವವನ್ನು ಸಂಪಾದಿಸಿ, ಶಾಂತಿಯ ನೆಲೆಯನ್ನು ಮುಟ್ಟಿದ. ಮಾನವನ ಜ್ಞಾನ ಸಂಚಯಕ್ಕೆ ಅನರ್ಘ್ಯ ಜ್ಞಾನರತ್ನವನ್ನು ಸಂಪಾದಿಸಿ ಕೊಟ್ಟ. ನಿಷ್ಠೆಯಿಂದ ಸತ್ಯವನ್ನು ಕಂಡು, ಅದನ್ನು ಜನಸಾಮಾನ್ಯರಿಗೆ ದರ್ಶನ ಮಾಡಿಸುವ ಸನ್ಮಾರ್ಗಗಾಮಿಯಾದ. ಯೇಸು ಕ್ರಿಸ್ತನಂತೆ ಮಾನವರ ಪರಮ ಹಿತೈಷಿಯಾಗಿ ಅವನು ಪ್ರಸಿದ್ಧನಾದ; ಮತ್ತು ಪೂಜ್ಯನಾದ. ಅಮರಸಿಂಹನು ಅಮರಕೋಶದಲ್ಲಿ ಸ್ತುತಿಸಿದ: "ಯಸ್ಯ ಜ್ಞಾನ ದಯಾಸಿಂಧೋಃ ರಗಾಧಸ್ಯಾನಘಾ ಗುಣಾಃ" ನಾದ. ನಿಷ್ಕಾಮವಂತ ಅಹಿಂಸಾಪರನೂ, ಮತ್ತು ಕರುಣಾಮೂರ್ತಿಯೂ ಆದ ಅವನು ಕ್ಷೋಭೆಯ ಮಧ್ಯೆ ಸ್ವಸ್ಥತೆಯನ್ನೂ ಅಸತ್ಯದ ಮಧ್ಯೆ ಸತ್ಯವನ್ನೂ ಕಾಣಬೇಕೆಂದು ಸಾರಿದನು. ಧರ್ಮವನ್ನು ಜೀವನದೊಂದಿಗೆ ಹೊಂದಿಸುವ ಪ್ರಯತ್ನಕ್ಕೆ ಅವನ ಬೋಧನೆಯು ಪ್ರಚೋದನೆ ನೀಡಿತು. ಅವನ ವ್ಯಕ್ತಿತ್ವದಲ್ಲಿ ಶ್ರದ್ಧೆ ಮತ್ತು ಕರುಣೆ ಸಮಾವೇಶಗೊಂಡಿದೆ.



8 ನೇ ಪುಟದಿಂದ

ಸಮ್ಮೇಳನದ ಅಂಗವಾಗಿ ವಿವಿಧ ಗೋಷ್ಠಿಗಳು, ಶರಣ ಸಾಹಿತ್ಯ ಪ್ರದರ್ಶನಗಳು ನಡೆದದ್ದು ಔಚಿತ್ಯಪೂರ್ಣ. ಉತ್ಸವವಂತೂ ಆಕರ್ಷಣೀಯವಾಗಿತ್ತು. ವಿವಿಧ ಗೋಷ್ಠಿಗಳಲ್ಲಿ ಭಾಗವಹಿಸಿದ ವಿದ್ವಾಂಸರು ಮಂಡಿಸಿದ ಪ್ರಬಂಧಗಳು ಮೌಲಿಕವಾಗಿದ್ದುದರ ಜೊತೆಗೆ ಮುಂದೆ ಮಾಡಬೇಕಾದ ಕಾರ್ಯಗಳಿಗೆ ದಿಕ್ಸೂಚಿಯಾದವು. ಶರಣ ಸಾಹಿತ್ಯದಲ್ಲಿ ಕೃಷಿಮಾಡಿದ ಉದ್ದಾಮ ವಿದ್ವಾಂಸರು ವಿಶೇಷ ಆಹ್ವಾನಿತರಾಗಿ ಭಾಗವಹಿಸಿದ್ದು ಸಮ್ಮೇಳನಕ್ಕೆ ಗೌರವಾನ್ವಿತವಾಗಿದ್ದಿತು.

ಸಮ್ಮೇಳನದಲ್ಲಿ ಭಾಗವಹಿಸಿದೆಲ್ಲರಿಗೂ ಯಾವ ಕೊರತೆಯೂ ಉಂಟಾಗದಂತೆ ಊಟೋಪಚಾರ, ವಸತಿ, ಸಂಚಾರ ಸಂಪರ್ಕದ ವ್ಯವಸ್ಥೆ ನಿಜಕ್ಕೂ ಚೆನ್ನಾಗಿತ್ತು. ಸಮ್ಮೇಳನದ ಯಶಸ್ಸಿಗಾಗಿ ದುಡಿದ ಸಹಸ್ರಾರು ಬಂಧುಗಳ ನಿಷ್ಕಾಮ ಸೇವೆ, ಸೌಜನ್ಯಗಳು ನಿಜಕ್ಕೂ ಅಭಿನಂದನೀಯ.

ಅಖಿಲ ಭಾರತ ಶರಣ ಸಾಹಿತ್ಯ ಸಮ್ಮೇಳನ ಮುಂದಿನ ಭಾರಿ ಪುಣ್ಯಕ್ಷೇತ್ರ ಶ್ರೀ ಸಿದ್ಧಗಂಗಾ ಮಠದಲ್ಲಿ ಜರುಗುತ್ತದೆ ಎಂದು ಪ್ರಕಟಿಸಿದಾಗ ಪರಿಷತ್ತಿನ ಪದಾಧಿಕಾರಿಗಳಿಂದ ಮೊದಲುಗೊಂಡು ಸಮ್ಮೇಳನಕ್ಕೆ ಆಗಮಿಸಿದ್ದ ಎಲ್ಲರಿಗೂ ಇನ್ನಿಲ್ಲದಂಥ ಸಂತೋಷ, ಸಂಭ್ರಮವಾಯಿತು. ಕರತಾಡನದ ಮೂಲಕ ಅದನ್ನು ಪ್ರಕಟಿಸಿದರು.

ಲಿಂಗೈಕ್ಯ ಪೂಜ್ಯ ಶ್ರೀ ಶ್ರೀ ಶಿವರಾತ್ರಿರಾಜೇಂದ್ರ ಮಹಾಸ್ವಾಮಿಗಳವರ, ಶರಣ ತತ್ವಾಭಿಮಾನಿಗಳ ಬಹು ದಿನದ ಕನಸು ನನಸಾದದ್ದು "ನಾಡಿನ ಪುಣ್ಯದ ಪೂರ್ವ ದಿಗಂತ ನವ ಅರುಣೋದಯವಾಗುತಿದೆ"— ಎಂಬ ಕವಿ ಕುವೆಂಪು ವಾಣಿಯಂತೆ ಸ್ವಾಗತಾರ್ಹವಾದದ್ದು. ●

---

10 ನೇ ಪುಟದಿಂದ

ಸಾಧ್ಯ. ಅದಕ್ಕಾಗಿ ಬಸವ ಜಯಂತಿಯ ಆಚರಣೆ ನಡೆದಿದೆ. ಜಯಂತಿಯ ಆಚರಣೆ ಕಾಲಹರಣಕ್ಕಾಗಿಯಾಗಲಿ, ಪ್ರಚಾರದ ಪ್ರಲೋಭನೆಗಾಗಲಿ, ಆಡಂಬರದ ಪ್ರದರ್ಶನಕ್ಕಾಗಿಯಲ್ಲ, ಆತ್ಮಶೋಧನೆಗಾಗಿ, ಅಂತರಂಗದ ಅವಲೋಕನಕ್ಕಾಗಿ ಎಂಬುದನ್ನು ಅರಿತಷ್ಟೂ ಒಳ್ಳೆಯದು ಎಂದು ಆಶೀರ್ವಚನ ಮಾಡುತ್ತ ಬಸವಾದಿ ಪ್ರಮಥರು ಸರ್ವರಿಗೂ ಮಂಗಳವನ್ನುಂಟುಮಾಡಲಿ ಎಂದು ನುಡಿದು ಹರಸಿದರು ಪರಮ ಪೂಜ್ಯ ಶ್ರೀ ಶ್ರೀಗಳವರು.

ರಾತ್ರಿ ಜಗಜ್ಜ್ಯೋತಿ ಬಸವೇಶ್ವರ ನಾಟಕ (185 ನೆಯ ಪ್ರಯೋಗ) ಶ್ರೀ ಸಿದ್ಧಲಿಂಗೇಶ್ವರ ನಾಟಕ ಮಂಡಳಿಯವರಿಂದ ನಡೆಯಿತು. ನಾಟಕದಲ್ಲಿ ಬರುವ ಸದಾನಂದ-ಚಿದಾನಂದರ ಪಾತ್ರಗಳು ಪ್ರೇಕ್ಷಕರನ್ನು ನಗೆಗಡಲಿನಲ್ಲಿ ಮುಳುಗೇಳಿಸಿದವು. ನಾಟಕದ ಸಂಗೀತದ ಬಗ್ಗೆ ಮೆಚ್ಚುಗೆಯ ಮಾತುಗಳನ್ನ ಆರೂಢಿಯ ಗ್ರಾಮೀಣ ಕಲಾವಿದರಿಬ್ಬರು ವರದಿಗಾರನ ಮುಂದೆ ವ್ಯಕ್ತಪಡಿಸಿದಾಗ ಸಾರ್ಥಕ ಭಾವ ಮೂಡಿತು............

ಮತ್ತೆ ಬರೆಯುತ್ತೇನೆ. ●

ಪ್ರಾಚೀನ ಯುಗದ ಬುದ್ಧ, ಮಧ್ಯಮ ಯುಗದ ಬಸವರಿಬ್ಬರೂ ಇಂತಹ ಧರ್ಮಪ್ರವರ್ತಕರು. ಇವರಿಬ್ಬರ ಕಾಲಗಳಿಗೆ ಶತಮಾನಗಳ ಅಂತರವಿದ್ದರೂ, ಅವರ ಮನೋಧರ್ಮದಲ್ಲಿ, ಪರಿಸ್ಥಿತಿಗನುಗುಣವಾಗಿ ಅವರು ತಾಳಿದ ಕ್ರಾಂತಿಕಾರಕ ಭಾವನೆಗಳಲ್ಲಿ ಸಮಾನದ ಲಕ್ಷಣಗಳಿವೆ. ಅವರು ಸಂತರು ಮತ್ತು ಪ್ರವಾದಿಗಳು. ಲೋಕ ಜೀವನದಲ್ಲಿ ವಿರಾಗನಾಗದೆ, ರಾಜನೀತಿಕೋವಿದನಾಗಿ ಇಹ–ಪರಗಳನ್ನು ಸಮನ್ವಯಗೊಳಿಸಿದವನು ಬಸವ. ಸರ್ವ ಸಂಗ ಪರಿತ್ಯಾಗ ಮಾಡಿ, ರಾಜ್ಯ, ಸಂಪತ್ತು, ಸತಿ, ಸುತರ ಭೋಗವನ್ನು ತ್ಯಜಿಸಿ, ಸತ್ಯದ ಅನ್ವೇಷಣಕ್ಕಾಗಿ ಸಂನ್ಯಾಸಿಯಾದವನು ಬುದ್ಧ. ಇವರಿರ್ವರ ವಿಲಕ್ಷಣ ವ್ಯಕ್ತಿತ್ವಗಳನ್ನು ಮತ್ತು ಅವರ ಧರ್ಮಗಳನ್ನು ತುಲನಾತ್ಮಕವಾಗಿ ಸಮಾಲೋಚಿಸುವುದು ಲಾಭದಾಯಕ.

ಕಪಿಲವಸ್ತುವೆಂಬ ರಾಜಧಾನಿಯಲ್ಲಿ ಶುದ್ಧೋದನ ಮಹಾರಾಜನಿಗೆ ಆಗರ್ಭ ಶ್ರೀಮಂತನಾಗಿ ಹುಟ್ಟಿ, ತೃಣಮಾತ್ರವೂ ಕೊರತೆಯನ್ನೇ ಕಾಣದೆ, ತನ್ನ ಏಕಮಾತ್ರ ಪುತ್ರ ಸತಿಯೊಡನೆ ಸ್ವರ್ಗಸುಖಿಯಾಗಿದ್ದ ಸಿದ್ಧಾರ್ಥ. ಜನ್ಮ-ಮೃತ್ಯು, ಜರೆ, ವ್ಯಾಧಿ, ದುಃಖ-ದೋಷಗಳ ಕಠೋರ ಸತ್ಯವು ಅವನಿಗೆ ಒಮ್ಮೆ ಮಾತ್ರ ಕಂಡ ತಕ್ಷಣವೇ, ಅತ್ಯಂತ ಕನಿಕರ ಪಟ್ಟು, ಜೀವಿತದ ಈ ಸಂಕಟಗಳಿಗೆ ಕಾರಣವನ್ನೂ ಮತ್ತು ಅವುಗಳ ನಿವಾರಣೆಯ ಮಾರ್ಗವನ್ನು ಕಂಡುಹಿಡಿಯಲು ಸತಿ-ಸುತ-ಸಂಸಾರ-ಸಂಪತ್ತುಗಳು ಪ್ರತಿಬಂಧಕಗಳೆಂದು ಪರಿಗಣಿಸಿ, ಸರ್ವಸಂಗಪರಿತ್ಯಾಗಮಾಡಿ, ಸಂನ್ಯಾಸಿಯಾಗಿ ಹೊರಟನು. ಆಗಿನ ಕಾಲದ ಮುಮುಕ್ಷುಗಳಂತೆ ತಪಸ್ಸನ್ನಾಚರಿಸಿದ ; ಮಂತ್ರಶಕ್ತಿ ಔಪಾಸನೆ ಮುಂತಾದ ಸಾಧನೆಗಳಲ್ಲಿ ತೊಡಗಿದ. ಆದರೂ ಅವನ ಗತಿ ಕಾಣಲಿಲ್ಲ. ಅಲಸಿಕೆ ಆಯಾಸಗಳ ಪರವೆಯೇ ಇಲ್ಲದೆ, ನೈಸಗಿಕ ಘಟನೆಗಳ ಕಾರಣಗಳನ್ನರಸಿದನು. ಪ್ರಚಲಿತ ಮಾರ್ಗಗಳಲ್ಲಿ ಕೃತಕೃತ್ಯನಾಗದೆ, ಧೀರತನದಿಂದ ತನ್ನದೇ ಆದ ಸ್ವತಂತ್ರ ಮಾರ್ಗಗಾಮಿಯಾಗಿ, ಬೋಧಿಸತ್ವವನ್ನು ಸಂಪಾದಿಸಿ, ಶಾಂತಿಯ ನೆಲೆಯನ್ನು ಮುಟ್ಟಿದ. ಮಾನವನ ಜ್ಞಾನ ಸಂಚಯಕ್ಕೆ ಅನರ್ಘ್ಯ ಜ್ಞಾನರತ್ನವನ್ನು ಸಂಪಾದಿಸಿ ಕೊಟ್ಟ. ನಿಷ್ಠೆಯಿಂದ ಸತ್ಯವನ್ನು ಕಂಡು, ಅದನ್ನು ಜನಸಾಮಾನ್ಯರಿಗೆ ದರ್ಶನ ಮಾಡಿಸುವ ಸನ್ಮಾರ್ಗಗಾಮಿಯಾದ. ಯೇಸು ಕ್ರಿಸ್ತನಂತೆ ಮಾನವರ ಪರಮ ಹಿತೈಷಿಯಾಗಿ ಅವನು ಪ್ರಸಿದ್ಧನಾದ ; ಮತ್ತು ಪೂಜ್ಯನಾದ. ಅಮರಸಿಂಹನು ಅಮರಕೋಶದಲ್ಲಿ ಸ್ತುತಿಸಿದ: "ಯಸ್ಯ ಜ್ಞಾನ ದಯಾಸಿಂಧೋಃ ರಗಾಧಸ್ಯಾನಘಾ ಗುಣಾಃ" ನಾದ. ನಿಷ್ಠಾವಂತ ಅಹಿಂಸಾಪರನೂ, ಮತ್ತು ಕರುಣಾಮೂರ್ತಿಯೂ ಆದ ಅವನು ಕ್ಷೋಭೆಯ ಮಧ್ಯೆ ಶೃಚ್ಛತೆಯನ್ನೂ ಅಸತ್ಯದ ಮಧ್ಯೆ ಸತ್ಯವನ್ನೂ ಕಾಣಬೇಕೆಂದು ಸಾರಿದನು. ಧರ್ಮವನ್ನು ಜೀವನದೊಂದಿಗೆ ಹೊಂದಿಸುವ ಪ್ರಯತ್ನಕ್ಕೆ ಅವನ ಬೋಧನೆಯು ಪ್ರಚೋದನೆ ನೀಡಿತು. ಅವನ ವ್ಯಕ್ತಿತ್ವದಲ್ಲಿ ಶ್ರದ್ಧೆ ಮತ್ತು ಕರುಣೆ ಸಮಾವೇಶಗೊಂಡಿದೆ.



8 ನೇ ಪುಟದಿಂದ
ಸಮ್ಮೇಳನದ ಅಂಗವಾಗಿ ವಿವಿಧ ಗೋಷ್ಠಿಗಳು, ಶರಣ ಸಾಹಿತ್ಯ ಪ್ರದರ್ಶನ
ಗಳು ನಡೆದದ್ದು ಔಚಿತ್ಯಪೂರ್ಣ. ಉತ್ಸವವಂತೂ ಆಕರ್ಷಣೀಯವಾಗಿತ್ತು.
ವಿವಿಧ ಗೋಷ್ಠಿಗಳಲ್ಲಿ ಭಾಗವಹಿಸಿದ ವಿದ್ವಾಂಸರು ಮಂಡಿಸಿದ ಪ್ರಬಂಧಗಳು ಮೌಲಿಕ
ವಾಗಿದ್ದುದರ ಜೊತೆಗೆ ಮುಂದೆ ಮಾಡಬೇಕಾದ ಕಾರ್ಯಗಳಿಗೆ ದಿಕ್ಸೂಚಿಯಾದವು.
ಶರಣ ಸಾಹಿತ್ಯದಲ್ಲಿ ಕೃಷಿಮಾಡಿದ ಉದ್ದಾಮ ವಿದ್ವಾಂಸರು ವಿಶೇಷ ಆಹ್ವಾನಿತರಾಗಿ
ಭಾಗವಹಿಸಿದ್ದು ಸಮ್ಮೇಳನಕ್ಕೆ ಗೌರವಾನ್ವಿತವಾಗಿದ್ದಿತು.

ಸಮ್ಮೇಳನದಲ್ಲಿ ಭಾಗವಹಿಸಿದ್ದೆಲ್ಲರಿಗೂ ಯಾವ ಕೊಂತೆಯೂ ಉಂಟಾಗದಂತೆ
ಊಟೋಪಚಾರ, ವಸತಿ, ಸಂಚಾರ ಸಂಪರ್ಕದ ವ್ಯವಸ್ಥೆ ನಿಜಕ್ಕೂ ಚೆನ್ನಾಗಿತ್ತು.
ಸಮ್ಮೇಳನದ ಯಶಸ್ವಿಗಾಗಿ ದುಡಿದ ಸಹಸ್ರಾರು ಬಂಧುಗಳ ನಿಷ್ಕಾಮ ಸೇವೆ, ಸೌಜ
ನ್ಯಗಳು ನಿಜಕ್ಕೂ ಅಭಿನಂದನೀಯ.

ಅಖಿಲ ಭಾರತ ಶರಣ ಸಾಹಿತ್ಯ ಸಮ್ಮೇಳನ ಮುಂದಿನ ಭಾರಿ ಪುಣ್ಯಕ್ಷೇತ್ರ
ಶ್ರೀ ಸಿದ್ಧಗಂಗಾ ಮಠದಲ್ಲಿ ಜರುಗುತ್ತದೆ ಎಂದು ಪ್ರಕಟಿಸಿದಾಗ ಪರಿಷತ್ತಿನ ಪದಾಧಿ
ಕಾರಿಗಳಿಂದ ಮೊದಲುಗೊಂಡು ಸಮ್ಮೇಳನಕ್ಕೆ ಆಗಮಿಸಿದ್ದ ಎಲ್ಲರಿಗೂ ಇನ್ನಿಲ್ಲದಂಥ
ಸಂತೋಷ, ಸಂಭ್ರಮವಾಯಿತು. ಕರತಾಡನದ ಮೂಲಕ ಅದನ್ನು ಪ್ರಕಟಿಸಿದರು.

ಲಿಂಗೈಕ್ಯ ಪೂಜ್ಯ ಶ್ರೀ ಶ್ರೀ ಶಿವರಾತ್ರಿರಾಜೇಂದ್ರ ಮಹಾಸ್ವಾಮಿಗಳವರ,
ಶರಣ ತತ್ವಾಭಿಮಾನಿಗಳ ಬಹು ದಿನದ ಕನಸು ನನಸಾದದ್ದು " ನಾಡಿನ ಪುಣ್ಯದ
ಪೂರ್ವ ದಿಗಂತ ನವ ಅರುಣೋದಯವಾಗುತಿದೆ"— ಎಂಬ ಕವಿ ಕುವೆಂಪು ವಾಣಿ
ಯಂತೆ ಸ್ವಾಗತಾರ್ಹವಾದದ್ದು.

---

10 ನೇ ಪುಟದಿಂದ
ಬಸವ ಜಯಂತಿಯ ಆಚರಣೆ ನಡೆದಿದೆ. ಜಯಂತಿಯ ಆಚ
ಸಾಧ್ಯ. ಅದಕ್ಕಾಗಿ
ರಣೆ ಕಾಲಹರಣಕ್ಕಾಗಿಯಾಗಲಿ, ಪ್ರಚಾರದ ಪ್ರಲೋಭನೆಗಾಗಲಿ, ಆಡಂಬರದ
ಪ್ರದರ್ಶನಕ್ಕಾಗಿಯಲ್ಲ, ಆತ್ಮಶೋಧನೆಗಾಗಿ, ಅಂತರಂಗದ ಅವಲೋಕನಕ್ಕಾಗಿ
ಎಂಬುದನ್ನು ಅರಿತಷ್ಟು ಒಳ್ಳೆಯದು ಎಂದು ಆಶೀರ್ವಚನ ಮಾಡುತ್ತ ಬಸವಾದಿ
ಪ್ರಮಥರು ಸರ್ವರಿಗೂ ಮಂಗಳವನ್ನುಂಟುಮಾಡಲಿ ಎಂದು ನುಡಿದು ಹರಸಿದರು
ಪರಮ ಪೂಜ್ಯ ಶ್ರೀ ಶ್ರೀಗಳವರು.

ರಾತ್ರಿ ಜಗಜ್ಯೋತಿ ಬಸವೇಶ್ವರ ನಾಟಕ (185 ನೆಯ ಪ್ರಯೋಗ) ಶ್ರೀ
ಸಿದ್ಧಲಿಂಗೇಶ್ವರ ನಾಟಕ ಮಂಡಳಿಯವರಿಂದ ನಡೆಯಿತು. ನಾಟಕದಲ್ಲಿ ಬರುವ
ಸದಾನಂದ–ಚಿದಾನಂದರ ಪಾತ್ರಗಳು ಪ್ರೇಕ್ಷಕರನ್ನು ನಗೆಗಡಲಿನಲ್ಲಿ ಮುಳುಗೇಳಿಸಿ
ದವು. ನಾಟಕದ ಸಂಗೀತದ ಬಗ್ಗೆ ಮೆಚ್ಚುಗೆಯ ಮಾತುಗಳನ್ನ ಆಡಿದರು
ಗ್ರಾಮೀಣ ಕಲಾವಿದರಿಬ್ಬರು ಪರದಿಗಾರನ ಮುಂದೆ ವ್ಯಕ್ತಪಡಿಸಿದಾಗ ಸಾರ್ಥಕ
ಭಾವ ಮೂಡಿತು............
ಮತ್ತೆ ಬರೆಯುತ್ತೇನೆ.

ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಕ್ಷೇತ್ರ.